


## ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವಾರಿ ಸೇವೆ

## ಭಕ್ತರಿಗೆ ಸ್ವಚ್ಛಂದ ಸೇವಾವಕಾಶ



ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ಪವಿತ್ರವಾದ ತಿರುಮಲೆಗೆ ವರ್ಷಂಪ್ರತಿ ಲಕ್ಷಾಂತರ ಮಂದಿ ಭಕ್ತರು ಬಂದು ಹೋಗುತ್ತಾರೆ. ದೇಶದ ನಾನಾ ಭಾಗಗಳಿಂದ ಬರುವ ಈ ಯಾತ್ರಿಕರ ಸೇವೆಯಲ್ಲಿ ಮತ್ತೂ ಹೆಚ್ಚಿನ ಅನುಕೂಲಗಳನ್ನುಂಟುಮಾಡಲೆಂದು ತಿರುಮಲ ತಿರುಪತಿ ದೇವಸ್ಥಾನಗಳು "ಶ್ರೀವಾರಿ ಸೇವೆ"ಯನ್ನು ಆರಂಭಿಸಿದೆ.

ಸೇವಾ ಮನೋಭಾವವನ್ನು ಹೆಚ್ಚಿಸಿ, ಸೌಹಾರ್ದತೆಯನ್ನು ಬೆಳೆಸಿ ಭಕ್ತಿಭಾವವನ್ನು ಸರ್ವತ್ರ ಹರಡುವಂತಹ ಒಂದು ವಿಶಿಷ್ಟವಾದ ಅವಕಾಶವನ್ನು ಈ ಸೇವೆಯು ಒದಗಿಸುತ್ತದೆ. ಶ್ರುತಿ ಸ್ಮೃತಿಗಳು ಹೇಳುವಂತೆ ಗರ್ಭಗೃಹದಲ್ಲಿರುವ ಸ್ವಾಮಿಯನ್ನು ಆರಾಧಿಸುವುದರ ಮೂಲಕವಾಗಿ ಮಾತ್ರವೇ ಅಲ್ಲದೆ, ಆತನ ಭಕ್ತರ ಸೇವೆಯನ್ನು ಮಾಡುವುದರಿಂದಲೂ ದೈವಾನುಗ್ರಹವನ್ನು ಪಡೆಯಬಹುದು. ಹೀಗಾಗಿ "ಶ್ರೀವಾರಿ ಸೇವೆ"ಯು ಸ್ವಾಮಿಯ ಭಕ್ತರನ್ನು ನಿಸ್ವಾರ್ಥದಿಂದ ಸೇವಿಸುವುದರ ಮೂಲಕ ಶ್ರೀನಿವಾಸ ದೇವರ ಸೇವೆ ಮಾಡಿ ಅಧಿಕ ಫಲ ಪಡೆಯುವಂತೆ ಮಾಡುವುದು.

ಭಕ್ತರು ತಮ್ಮ ಸ್ವಯಂಸೇವೆಯನ್ನು ಕೆಳಕಂಡ ಕ್ಷೇತ್ರಗಳಲ್ಲಿ ಮಾಡಬಹುದಾಗಿದೆ-

1. ಅನ್ನದಾನ ಯೋಜನೆ, 2. ಸರತಿಯ ಸಾಲು, 3. ಕಲ್ಯಾಣಕಟ್ಟೆ, 4. ಕಾಲುಹಾದಿಯ ಯಾತ್ರಿಕರಿಗೆ ನೆರವು ನೀಡುವಿಕೆ, 5. ಸಾಮಾನುಗಳನ್ನು ಭದ್ರಗೊಳಿಸುವ ಕೋಣೆ, 6. ವಾಹನ ನಿಲ್ದಾಣ, 7. ಉಚಿತ ವಸ್ತುಸಾಗಣೆ ಕೇಂದ್ರ, 8. ಸ್ವಾಮಿ ಪುಷ್ಕರಿಣಿ 9. ಸಮಾಚಾರ ಕೇಂದ್ರ, 10. ಶ್ರೀವಾರಿ ಆಲಯ.

ಯಾತ್ರಿಕರು ತಮ್ಮ ಅಪೇಕ್ಷೆ, ಆಸಕ್ತಿಗಳಿಗೆ ತಕ್ಕಂತೆ ಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು. ಅನ್ನದಾನಂ ಭವನದಲ್ಲಿ ಕೆಲಸ ಮಾಡುತ್ತಿರುವ ಕೌಂಟರಿನಲ್ಲಿ ತಮ್ಮ ಹೆಸರನ್ನು ಕೂಡಲೇ ನೊಂದಾವಣೆ ಮಾಡಿಕೊಳ್ಳಬಹುದು. ಹತ್ತು ಮಂದಿಗೆ ಕಡಿಮೆಯಿಲ್ಲದಂತೆ ಒಂದು ಗುಂಪಿನಲ್ಲಿ ಒಂದು ವಾರಕ್ಕೆ ಕಡಿಮೆಯಾಗದಂತೆ ಸೇವೆ ಸಲ್ಲಿಸಬಯಸುವವರು ಮೊದಲೇ ತಿಳಿಸಿ ಸೇವೆಯಲ್ಲಿ ಭಾಗವಹಿಸಬಹುದು. ಇವರಿಗೆ ಉಚಿತ ವಸತಿ ಹಾಗೂ ಭೋಜನ ಸೌಕರ್ಯವನ್ನು ತಿರುಮಲೆಯಲ್ಲಿ ಒದಗಿಸಲಾಗುವುದು. ಭಜನ ಸಂಘಗಳೂ ಸ್ಫೂರ್ತಿದಾಯಕವಾದ ಈ ಸೇವೆಯಲ್ಲಿ ಭಾಗವಹಿಸಬಹುದು.

"ಶ್ರೀವಾರಿಸೇವೆ"ಯಲ್ಲಿ ಪಾಲು ಹಂಚಿಕೊಳ್ಳಬಯಸುವ ಯಾತ್ರಿಕ ಭಕ್ತರು ತಿರುಮಲೆಯ ಅನ್ನದಾನಂ ಸಮುದಾಯ ಭವನದಲ್ಲಿರುವ ಶ್ರೀವಾರಿ ಸೇವೆ ವಿಭಾಗದಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಬೇಕೆಂದು ಕೋರಲಾಗಿದೆ.

ಹೆಚ್ಚಿನ ವಿವರಗಳಿಗೆ : **ಶ್ರೀವಾರಿಸೇವೆ ವಿಭಾಗ ಅನ್ನದಾನಂ ಕಾಂಪ್ಲೆಕ್ಸ್ - ತಿರುಮಲ , ದೂರವಾಣಿ - 08574 - 79693.**

**ಪೌರಸಂಬಂಧಾಧಿಕಾರಿಗಳು, ತಿ. ತಿ. ದೇವಸ್ಥಾನಗಳು - ತಿರುಪತಿ. ದೂರವಾಣಿ - 08574 - 32813.**

**ಕಾರ್ಯನಿರ್ವಹಣಾಧಿಕಾರಿ.**







ಭಕ್ತಳ ಬನ್ನ ಪರಾಕು ಭಾಗ್ಯದ ನಿಧಿ || ಪ ||

ನಿನ್ನ ನಂಬಿದೆ ನೀರಜಾಕ್ಷ ಪರಾಕು
ನಿನ್ನ ರನ್ನೆಯ ಒಲುಮೆ ಬೇಕು ಪರಾಕು
ಅನ್ಯರ ಸಂಗವನೊಲ್ಲೆ ಪರಾಕು
ಎನ್ನಪೇಕ್ಷೆಯ ಸಲಿಸೋ ಪರಾಕು || 1 ||

ಶೇಷ ಶಯನ ಶ್ರೀನಿವಾಸ ಪರಾಕು
ಸಾಸಿರ ನಾಮದ ಒಡೆಯ ಪರಾಕು
ದೋಷ ದುರಿತಹರ ಸ್ವಾಮಿ ಪರಾಕು
ಭಾಷೆ ಪಾಲಿಪುದೆನ್ನ ವಾಸುದೇವ ಪರಾಕು || 2 ||



ರತಿ ಪತಿ ಪಿತ ಮಾಧವನೆ ಪರಾಕು
ಅತಿರೂಪ ಎನ್ನಯ್ಯನೆ ಪರಾಕು
ಹಿತವುಂಟಾದರೆ ಕಾಯೋ ಪರಾಕು
ಕರ್ತು ಹೆಳವನಕಟ್ಟೆ ರಂಗ ಪರಾಕು || 3 ||



**– ಹೆಳವನಕಟ್ಟೆ ಗಿರಿಯಮ್ಮ.**

ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
## ತಿರುಪತಿ

# ವಾರ್ಷಿಕ ಬ್ರಹ್ಮೋತ್ಸವಗಳು

## 27-5-2001 ರಿಂದ 5-6-2001

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಬೆಳಗ್ಗೆ | ಸಂಜೆ |
|---|---|---|---|
| 27-5-2001 | ಭಾನುವಾರ | -- | ಸೇನಾಪತಿ ಉತ್ಸವ. |
| 28-5-2001 | ಸೋಮವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 29-5-2001 | ಮಂಗಳವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 30-5-2001 | ಬುಧವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 31-5-2001 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 1-6-2001 | ಶುಕ್ರವಾರ | ಪಲ್ಲಕಿಯಲ್ಲಿ ಮೋಹಿನೀ ಅವತಾರ | ಗರುಡವಾಹನ. |
| 2-6-2001 | ಶನಿವಾರ | ಹನುಮಂತವಾಹನ | |
| | | ಸಂಜೆ - ವಸಂತೋತ್ಸವ | ಗಜವಾಹನ. |
| 3-6-2001 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 4-6-2001 | ಸೋಮವಾರ | ರಥೋತ್ಸವ | ಅಶ್ವವಾಹನ. |
| 5-6-2001 | ಮಂಗಳವಾರ | ತೀರ್ಥವಾರಿ, ಚಕ್ರಸ್ನಾನ. | ಧ್ವಜಾವರೋಹಣ. |

ಸೂಚನೆ : ಶ್ರೀ ಗೋವಿಂದರಾಜಸ್ವಾಮಿ ಆಲಯ ತಿರುಪತಿಯ ರೈಲ್ವೆ ನಿಲ್ದಾಣ ಬಸ್‌ನಿಲ್ದಾಣಗಳ ಬಳಿಯಲ್ಲಿದೆ. ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಇರುತ್ತವೆ. ಹೆಚ್ಚಿನ ವಿವರಗಳಿಗೆ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ - 32 ಜೂನ್ 2001 ಸಂಚಿಕೆ - 1

ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ|| ಎನ್.ಎಸ್. ರಾಮಮೂರ್ತಿ,**

ಮುದ್ರಣ :
**ಐ. ಪಾರ್ವತೀಶ್ವರ ರಾವ್,**
ಬಿ.ಎ.,ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್,** ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ
ಪ್ರತಿಗಳೂ
ಎಲ್ಲ ತಿ.ತಿ.ದೇ.
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**



## ವಿಷಯಸೂಚಿ



ಮುಖಚಿತ್ರ : ಉಭಯ ನಾಯಕಿಯರೊಡನೆ ಶ್ರೀ ಮಲೆಯಪ್ಪಸ್ವಾಮಿ.
ಹಿಂಬದಿಯಲ್ಲಿ : ಹೃಷೀಕೇಶದಲ್ಲಿಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯ.

# ನಿಮ್ಮೊಡನೆ.......



ಕ್ಷರವಲ್ಲದ್ದು ಅಕ್ಷರ ಎಂದರು ಹಿರಿಯರು. ನಶ್ವರವಾದ ಪ್ರಪಂಚದಲ್ಲಿ ಅಕ್ಷರಕ್ಕೆ ಕ್ಷತಿಯಿಲ್ಲವೆಂಬುದು ಇಲ್ಲಿನ ಭಾವಾರ್ಥ. ಅಕ್ಷರ ರೂಪವನ್ನು ಪಡೆದ ಆಲೋಚನೆ ಆರದ ದೀಪವಾಗಿ, ಆ ತಲೆಮಾರಿಗೇ ಅಲ್ಲದೆ ಆಗಾಮಿ ತಲೆಮಾರಿಗೂ ಬೆಳಕು ಬೀರುತ್ತದೆ. ಸಾವಿರಾರು ವರ್ಷಗಳ ಹಿಂದೆ ಮಾನವ ಜನಾಂಗಕ್ಕೇ ಅರಿವಿನ ಔದಾರ್ಯವನ್ನು ತೋರಿಸಿದ ಪುರಾಣೇತಿಹಾಸಗಳು ಇಂದಿಗೂ ನಮಗೆ ಮಾರ್ಗದರ್ಶಕಗಳಾಗಿವೆಯೆಂದರೆ - ಅವು ಅಕ್ಷರ ರೂಪ ಪಡೆದು ಶಾಶ್ವತವಾದದ್ದೇ ಕಾರಣವೆನ್ನಬೇಕು.

ಅಕ್ಷರ ರೂಪ ತಳೆದ ಆಲೋಚನೆ ಚಿರಂಜೀವಿ. ಅಕ್ಷರವೊಂದು ಆಯುಧ. ಅಕ್ಷರವೊಂದು ಸಾಧನ. ಅಕ್ಷರ ಒಂದು ಜ್ಞಾನ ಸಾಗರ.

ತಾಳಪತ್ರಗಳ ಗ್ರಂಥಗಳಿಂದ ತಾಮ್ರ ಪತ್ರಗಳವರೆಗೆ ಪಯಣಿಸುತ್ತ ಅತ್ಯಾಧುನಿಕ ಪದ್ಧತಿಗಳ ಮುದ್ರಣ ವ್ಯವಸ್ಥೆಯಲ್ಲಿ ಕಾಲಿರಿಸಿದ್ದೇವೆ. ಪ್ರಸಾರ ಪ್ರಚಾರ ಸಾಧನಗಳಲ್ಲಿಯೂ ಸಹ ಗಣನೀಯವಾದ ಪರಿವರ್ತನೆ ಕಂಡುಬರುತ್ತಿದೆ.

ಹೊರ ಜಗತ್ತಿನಲ್ಲಿ ಎಂತಹ ಪರಿವರ್ತನೆಗಳು ಕಂಡುಬರುವಂತಿದ್ದರೂ ಅಂದಿಗೂ ಇಂದಿಗೂ ಮನುಷ್ಯನ ಮನವೊಂದೇ. ಮಾನವೀಯ ಸಂಬಂಧ, ಸತ್ಯ, ಧರ್ಮ, ದೈವ, ಒಂದೇ. ಅಶಾಂತಿಯಿಂದ ಪ್ರಕ್ಷುಬ್ಧವಾದ ಮಾನವನ ಮನಸಿಗೆ ಶಾಂತಿಯನ್ನು ನೀಡುವುದು ಒಂದೇ - ಧರ್ಮಚಿಂತನೆ. ಮಾನವ ಸಮಾಜವನ್ನು ಒಳ್ಳೆಯ ಮಾರ್ಗದಲ್ಲಿ ನಡೆಸುವುದು ಧರ್ಮರಕ್ಷಣೆ.

ಪ್ರಪಂಚದ ಮುಖ್ಯಧಾರೆಗಳಲ್ಲಿ ಒಂದಾದ ಹಿಂದೂಧರ್ಮಕ್ಕೆ ಕೈಂಕರ್ಯ ಮಾಡುವ ಸಂಸ್ಥೆ ತಿರುಮಲ ತಿರುಪತಿ ದೇವಸ್ಥಾನಗಳು. ಹಿಂದೂ ಧರ್ಮದ ಪ್ರಸಾರಕ್ಕೆ ಪ್ರಚಾರಕ್ಕೆ ದೇವಸ್ಥಾನಗಳ ಕೈಂಕರ್ಯ ಅಪಾರವಾದದ್ದು ಎನ್ನಲಡ್ಡಿಯಿಲ್ಲ. ಅವರವರ ಧರ್ಮವನ್ನು ಅವರವರು ರಕ್ಷಿಸಿಕೊಳ್ಳಬೇಕು. ಅವರ ಧರ್ಮವನ್ನು ಅವರು ಆಚರಿಸಬೇಕು. ಹಾಗಾಗಿಯೇ ಧರ್ಮಪ್ರಚಾರ ಪರಿಷತ್, ಕೇಂದ್ರೀಯ ಗ್ರಂಥಾಲಯ, ಆಧ್ಯಾತ್ಮಿಕ ಗ್ರಂಥ ಮುದ್ರಣ, ಧರ್ಮರಥ - ಮೊದಲಾದವುಗಳ ಮೂಲಕ ಹಿಂದೂ ಮತವನ್ನು ಗ್ರಾಮಗ್ರಾಮದಲ್ಲಿಯೂ ಪ್ರಚಾರ ಮಾಡಲಾಗುತ್ತಿದೆ. ಅಸಾಮಾನ್ಯ ವಿಷಯಗಳನ್ನು ಶ್ರೀ ಸಾಮಾನ್ಯನಿಗೆ ಸುಲಭವಾಗಿ ದೊರೆಯುವಂತೆ ಮಾಡುವಲ್ಲಿ ಕೃಷಿ ನಡೆಸುತ್ತಿದೆ.

ತಿ.ತಿ.ದೇ. ಪ್ರತಿ ತಿಂಗಳೂ ಪ್ರಕಟಿಸುತ್ತಿರುವ ಸಪ್ತಗಿರಿ ಈ ಒಂದು ವಿಶಾಲ ಯೋಜನೆಯ ಒಂದು ಭಾಗ. ಈ ಸಂಚಿಕೆಯಿಂದ 31 ಸಂವತ್ಸರ ಮುಗಿದು 32ನೇ ಸಂಪುಟ ಆರಂಭವಾಗುತ್ತದೆ. ಆಲಯದ ಧಾರ್ಮಿಕ ಪತ್ರಿಕೆ ಇಷ್ಟು ದಿನ ನಿರಂತರವಾಗಿ ನಡೆದಿದೆಯೆಂದರೆ ಅದಕ್ಕೆ ಕಾರಣ ಭಕ್ತರಾದ ನೀವು. ಆಶೀರ್ವದಿಸುವ ಆ ಸ್ವಾಮಿ.

ದೇವಸ್ಥಾನ ಬುಲೆಟಿನ್ ಆಗಿ ಆರಂಭವಾದ ಪತ್ರಿಕೆ ಕನ್ನಡ, ತೆಲುಗು, ಹಿಂದಿ, ಆಂಗ್ಲ, ತಮಿಳು - ಭಾಷೆಗಳ ಸಪ್ತಗಿರಿಯಾಗಿ, ತಿರುಮಲೆಯ ಬಗ್ಗೆ, ಅಲ್ಲಿನ ಭಕ್ತರ ಬಗ್ಗೆ, ನಿಮ್ಮ ಯಾತ್ರೆಯ ಬಗ್ಗೆ, ಇಲ್ಲಿನ ಸೇವೆಗಳ ಬಗ್ಗೆ ಹಲವು ಹನ್ನೊಂದು ವಿಷಯಗಳನ್ನು ಓದುಗರಿಗೆ ತಲುಪಿಸುತ್ತಿದೆ. ಜೊತೆಗೇ ಧರ್ಮದ ಬಗ್ಗೆ ವ್ಯಾಪಕವಾದ ವ್ಯಾಸಗಳನ್ನು ವ್ಯಾಸಂಗ ಮಾಡುವವರಿಗೆಂದೇ ಪ್ರಕಟಿಸುತ್ತಿದೆ.

ಸಪ್ತಗಿರಿ ಶ್ರೀಸಾಮಾನ್ಯ ಓದುಗರ ಕೈಪಿಡಿಯಾಗಬೇಕೆಂಬುದು ತಿ.ತಿ.ದೇ.ಗಳ ಆಸೆ. ಇದಕ್ಕಾಗಿ ತಮ್ಮ ಸಲಹೆ ಸೂಚನೆಗಳಿಗೆ ಸದಾ ಸ್ವಾಗತವಿದೆ. ಪತ್ರಿಕೆಯನ್ನು ತಾವು ಮಾತ್ರವೇ ಓದುವುದಲ್ಲ; ತಮ್ಮವರನ್ನೂ ಓದಲು ಪ್ರೋತ್ಸಾಹಿಸಿ, ಪತ್ರಿಕೆಯನ್ನು ಪ್ರೋತ್ಸಾಹಿಸಬೇಕು.

ಅತಿ ತ್ವರೆಯಲ್ಲಿ ಸಪ್ತಗಿರಿ ಒಂದು ಲಕ್ಷ ಪ್ರತಿಗಳಲ್ಲಿ ಮುದ್ರಣವಾಗಬೇಕು ಎಂಬುದು ತಿ. ತಿ. ದೇವಸ್ಥಾನಗಳ ಆಶಯ. ಆ ಮೂಲಕವಾಗಿ ಲಕ್ಷಾಂತರಮಂದಿಗೆ ಸ್ವಾಮಿಯ ಸೇವೆಯ ವಿವರಗಳನ್ನು ನೀಡಬೇಕೆಂದು ಆಶಿಸುತ್ತದೆ. ಸ್ವಾಮಿಯ ಕೃಪೆಯಿಂದ ಈ ಲಕ್ಷ್ಯಸಾಧನೆಯಲ್ಲಿ ಗಮ್ಯ ಸೇರುವ ಭರವಸೆಯಿದೆ, ನಿಮ್ಮ ಆಶೀರ್ವಾದ ಇರಲಿ.

ಶುಭಂ ಭೂಯಾತ್

**ಡಾ|| ಪಿ. ಕೃಷ್ಣಯ್ಯ.**
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ.

# ಶ್ರೀ ರಾಮನ ಪರತ್ವ

- ಕೆ. ಎಸ್. ಶ್ರೀವತ್ಸ

ಶ್ರೀರಾಮನ ಕಥಾ ವೃತ್ತಾಂತವನ್ನು ಕೊಟ್ಟ ವಾಲ್ಮೀಕಿಯನ್ನೇ ಆಧಾರವಾಗಿಟ್ಟುಕೊಂಡು ಕಾವ್ಯ, ನಾಟಕ, ಸ್ತೋತ್ರ, ಗೀತ ಪ್ರಬಂಧ ರೂಪದಲ್ಲಿ ಅನೇಕ ಕೃತಿಗಳು ಬೆಳೆದು ಬಂದಿವೆ. ಇದಲ್ಲದೆ ಅನೇಕ ಪುರಾಣಗಳಲ್ಲಿ ಅಂತರ್ಗತವಾಗಿ ಇರುವ ರಾಮಾಯಣಗಳು ಅನೇಕವಿದ್ದು ತತ್ವ ಸಂಗ್ರಹ ರಾಮಾಯಣ, ಬ್ರಹ್ಮಾಂಡ ಪುರಾಣಾಂತರ್ಗತ ರಾಮಾಯಣ, ಆನಂದ ರಾಮಾಯಣ ಎಂಬ ಹೆಸರುಗಳಲ್ಲಿ ರಾಮಾಯಣವು ಪ್ರಚಾರದಲ್ಲಿದೆ. ಇವೆಲ್ಲವೂ ಸಂಸ್ಕೃತ ಗ್ರಂಥಗಳು. ದೇಶಭಾಷೆಯಲ್ಲಂತೂ ಲೆಕ್ಕವಿಲ್ಲದಷ್ಟು ಗ್ರಂಥರಾಶಿ ಇವೆ. ಆದರೆ ಇವುಗಳಲ್ಲಿ ಅನೇಕ ಗ್ರಂಥಗಳನ್ನು ಪ್ರಮಾಣಜ್ಞರಾದ ವ್ಯಾಸ, ಪರಾಶರ, ಶುಕ, ಬೋಧಾಯನರಾಗಲೀ, ಅನಂತರ ಬಂದ ಶಂಕರ, ರಾಮಾನುಜ ಮಧ್ವರಾಗಲೀ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿಲ್ಲ. ಆದಾಗ್ಯೂ ಜನ ಸಾಮಾನ್ಯರಿಂದ ಈ ಗ್ರಂಥಗಳು ಮಾನ್ಯ ಮಾಡಲ್ಪಟ್ಟಿವೆ.

ಸುಮಾರು 1500 ವರ್ಷಗಳಿಂದೀಚೆಗೆ ವೈದಿಕ ಮತವು ಸ್ಪಷ್ಟ ರೂಪುರೇಖೆಗಳನ್ನು ಪಡೆದಿದ್ದು, ಶಿವ, ಶಕ್ತಿ, ನಾರಾಯಣ ಮುಂತಾಗಿ ದೇವತಾ ಉಪಾಸನೆಗಳಲ್ಲಿ ಅಭಿಪ್ರಾಯ ಭೇದವಿದ್ದು ಅವರವರ ಹೃದಯ ಪ್ರೇರಣೆ ಹಾಗೂ ಪರಂಪರಾನುಗತ ಆಚರಣೆಯ ಮೇಲೆ ಭಾವನೆಗಳು ರೂಪುಗೊಂಡಿವೆ. ವಾಲ್ಮೀಕಿ ರಾಮಾಯಣದ ಕಾಲಕ್ಕೆ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಭೇದಗಳಾಗಲೀ, ಶೈವ ವೈಷ್ಣವ ಭೇದಗಳಾಗಲೀ ಅಷ್ಟಾಗಿ ಇರಲಿಲ್ಲ. ರಾಮಾಯಣವು ಮೂಲತಃ ತತ್ವ ಗ್ರಂಥವಾದರೂ, ಅನೇಕ ಕವಿಗಳು ಅದರಲ್ಲಿ ಕಾವ್ಯರಸಧಾರೆಯನ್ನು ಕಂಡು ಕೊಂಡು, ಕಾವ್ಯ ರಸ ಪೋಷಣೆಗೆ ಹೆಚ್ಚು ಒತ್ತನ್ನು ಕೊಟ್ಟು ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಭಾಸ, ಕಾಳಿದಾಸ, ಭವಭೂತಿ ಮುಂತಾದವರು ಇದರಲ್ಲಿ ಅಗ್ರಗಣ್ಯರು. ಹಾಗಾಗಿ ಇವರ ಕೃತಿಗಳು ವೇದಾಂತ ತತ್ವ ನಿರ್ಣಯಕ್ಕೆ ಪ್ರಮಾಣ ಗ್ರಂಥಗಳೆಂದು ಪರಿಗಣಿಸಲ್ಪಡುವುದಿಲ್ಲ. ವಾಲ್ಮೀಕಿಯ ಶ್ರೀಮದ್ ರಾಮಾಯಣದಲ್ಲಿ ಶ್ರೀ ರಾಮನು ಪರತ್ವ, ಸರ್ವಸ್ವಾತ್ಯರನು ಎಂಬ ಅಂಶ ಅನೇಕ ಕಡೆಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಕೆಲವು ಉದಾಹರಣೆಗಳನ್ನು ನೋಡಬಹುದು. ಶ್ರೀಮನ್ನಾರಾಯಣನೇ ಜಗಜ್ಜನ್ಮಾದಿ ಕಾರಣನು. ಇವನೇ ಧರ್ಮೋದ್ಧಾರಕ್ಕಾಗಿ, ಅಧರ್ಮ ನಾಶಕ್ಕಾಗಿ, ಸಜ್ಜನರನ್ನು ಹಿಂಸಿಸುತ್ತಿದ್ದ ರಾಕ್ಷಸರನ್ನು ಕೊಲ್ಲುವುದಕ್ಕಾಗಿ ಮಾನವ ರೂಪತಾಳಿ ಶ್ರೀರಾಮನಾಗಿ ಜನಿಸಿದನು. ಬ್ರಹ್ಮರುದ್ರಾದಿಗಳು ರಾವಣನ ವಧೆಗಾಗಿ ವಿಷ್ಣುವಿನ ಮರೆಹೊಕ್ಕರು.

ಏತಸ್ಮಿನ್ನಂತರೇ ವಿಷ್ಣುಃ
ಉಪಯಾತೋ ಮಹಾದ್ಯುತಿಃ



- ಆಗ ಅವರ ಮಧ್ಯೆ ತೋರಿದ ವಿಷ್ಣುವನ್ನು ದೇವತೆಗಳು ಈ ರೀತಿ ಪ್ರಾರ್ಥಿಸಿದರು.

ತ್ವಂ ಗತಿಃ ಪರಮಾ ದೇವ
ಸರ್ವೇಷಾಂ ನಃ ಪರಂತಪ
ನೀನೇ ದೇವ ಶ್ರೇಷ್ಠನು,
ನಮ್ಮೆಲ್ಲರಿಗೂ ಆಶ್ರಯನೂ, ರಕ್ಷಕನು

ವಿಶ್ವಾಮಿತ್ರರು ರಾಮನ ಬಗ್ಗೆ ಹೇಳುತ್ತಾ-

ಅಹಂ ವೇದ್ಮಿ ಮಹಾತ್ಮಾನಂರಾಮಂ
ಸತ್ಯಪರಾಕ್ರಮಂ

ಪರಶುರಾಮನೂ ಸಹ

ಅಕ್ಷಯಂ ಮಧು ಹಂತಾರಂ
ಜಾನಾಮಿತ್ವಾಂ ಸುಧಾರ್ಮಿಕಂ

ಮಧುವೆಂಬ ರಾಕ್ಷಸನನ್ನು ಕೊಂದ, ಅಕ್ಷಯನಾದ ಶ್ರೀ ವಿಷ್ಣುವನ್ನು ನೀನೆ ಎಂದು ತಿಳಿದಿದ್ದೇನೆ ಎಂದು ಹೇಳಿದ್ದಾನೆ. ಮಾರೀಚ-

ಅಪ್ರಮೇಯಂ ಹಿ ತತ್ತೇಜೋ
ಯಾಸ್ಯಸಾ ಜನಕಾತ್ಮಜಾ

ಅಪ್ರಮೇಯನೆಂಬ ಪದವು ಶ್ರೀವಿಷ್ಣುವಿಗೆ ಅನ್ವಯವಾಗುತ್ತದೆ.

ಕಿಷ್ಕಿಂಧಾಕಾಂಡದಲ್ಲಿ ತಾರೆಯ ವಾಕ್ಯ -

ನಿವಾಸ ವೃಕ್ಷ ಸಾಧೂನಾಂ
ಆಪನ್ನಾನಾಂ ಪರಾಗತಿಃ
ತ್ವಮಪ್ರಮೇಯ ಶ್ಚ
ದುರಾಸದಶ್ಚ...... ಇತ್ಯಾದಿ.

ಮಂಡೋದರಿಯು ಸಹ ರಾಮನನ್ನು ಮಹಾವಿಷ್ಣು ಎಂದು ತಿಳಿದಿದ್ದಳು-

ವ್ಯಕ್ತಮೇಷ ಮಹಾಯೋಗಿ
ಪರಮಾತ್ಮಾ ಸನಾತನಃ
ಅನಾದಿ ಮಧ್ಯ ನಿಧನೋ
ಮಹತಃ ಪರಮೋ ಮಹಾನ್

ಹೀಗೆ ಶ್ರೀರಾಮನು ಪರಾತ್ಪರ ವಸ್ತುವಾದ ಮಹಾವಿಷ್ಣುವಿನ ಅವತಾರವೆಂದು ಪರಿಗಣಿಸಲ್ಪಟ್ಟಿದ್ದರಿಂದ ಅವನು ಸಕಲರಿಗೂ ಉಪಾಸ್ಯದೇವತೆಯಾದನು. ಈ ಅಂಶವನ್ನು ನಂತರ ಬಂದ ಅನೇಕ ರಾಮಾಯಣಗಳಲ್ಲಿ ಇನ್ನೂ ಚೆನ್ನಾಗಿ ಪ್ರತಿಪಾದಿಸಲಾಗಿದೆ.

ಗರುಡ ಪುರಾಣದಲ್ಲಿ-

ಬ್ರಹ್ಮಾದ್ಯೈರಧಿಗತೋ ವಿಷ್ಣುಃ
ಈಶಾಂಶೈನಾವತೀರ್ಣವಾನ್
ತಸ್ಯ ರಾಮಾಭಿಧಾನಸ್ಯ
ಜಗನ್ನಾಥಸ್ಯ ಶಾಂರ್ಙ್ಗಿಣಃ

ಬ್ರಹ್ಮಾದಿಗಳಿಂದ ಪ್ರಾರ್ಥಿತನಾಗಿ ಜಗದೀಶ್ವರನೇ ತನ್ನ ವಿಷ್ಣುವಿನ ಅಂಶದಿಂದ ರಾಮನಾಗಿ ಅವತರಿಸಿದನು.

ಹಿರಣ್ಯಗರ್ಭ ಸಂಹಿತೆಯಲ್ಲಿ-

ಬ್ರಹ್ಮವಿಷ್ಣುಶ್ಚ ರುದ್ರಶ್ಚ
ತ್ವಮೇವ ರಘುನಂದನ
ಆದಿತ್ಯಾದಿ ಗ್ರಹಾಶ್ಚೈವ
ತ್ವಮೇವ ರಘುನಂದನ

ರಾಮನೇ ಬ್ರಹ್ಮ ವಿಷ್ಣು ರುದ್ರರೂಪಿ ಆದಿತ್ಯಾದಿ ಗ್ರಹಗಳೆಲ್ಲವೂ ರಾಮನೇ-

ಬ್ರಹ್ಮಾಂಡ ಪುರಾಣದಲ್ಲಿ-

ಬ್ರಹ್ಮ ವಿಷ್ಣು ಶಿವ ರೂಪತೋಽಖಿಲಂ
ಪಾಂತಿ ಹಂತಿ ಸೃಜತೇ
ರಾಮ ಏವ ಮುನಿವರ್ಯ ತತೋನ್ಯನಾಸ್ತಿ
ನಾಸ್ತಿ ಪರಮಂ ಖಲು ದೈವಂ

ಬ್ರಹ್ಮನಾಗಿ ಸೃಷ್ಟಿಸಿ, ಶಿವರೂಪದಿಂದ ನಾಶಮಾಡಿ, ವಿಷ್ಣು ರೂಪದಿಂದ ಜಗತ್ಪಾಲನೆಯನ್ನು ಮಾಡುವ ಪರತತ್ವವೇ ಶ್ರೀರಾಮನು - ಇನ್ನೂ ಅನೇಕ ಪುರಾಣಗಳಲ್ಲಿ ರಾಮ ಮತ್ತು ಶಿವ ಇವರಿಗೆ ಭೇದವಿಲ್ಲವೆಂದೂ, ಶ್ರೀರಾಮನು ಶಿವನನ್ನು ಪೂಜಿಸಿದನೆಂದೂ, ಶಿವನು ರಾಮನನ್ನು ಪೂಜಿಸಿದನೆಂದು ಉಲ್ಲೇಖಗಳಿವೆ. ರಾಮಮಂತ್ರವೂ ಅಷ್ಟಾಕ್ಷರ ಮಂತ್ರದ ಬೀಜಾಕ್ಷರವಾದ ''ರಾ'' ಮತ್ತು ಪಂಚಾಕ್ಷರಿ ಮಂತ್ರದ ಬೀಜಾಕ್ಷರವಾದ ''ಮ'' ಎರಡನ್ನೂ ಸೇರಿಸಿದರೆ ಆಗುವ ದಿವ್ಯ ಮಂತ್ರವೆಂದೂ ಸಹ ಹೇಳಲಾಗಿದೆ. ಒಟ್ಟಿನಲ್ಲಿ ಶ್ರೀರಾಮನ ಪರತತ್ವ, ಅವನೇ ಸರ್ವ ದೇವಾಧಿಪತಿ ಮತ್ತು ವಿಶ್ವ ಪತಿ, ವಿಶ್ವಕ್ಕೆ ಲಯಕರ್ತನೂ ಎಂಬ ತತ್ವವನ್ನು ಶ್ರೀಮದ್ ವಾಲ್ಮೀಕಿ ರಾಮಾಯಣ, ಶ್ರುತಿಗಳು ಹಾಗೂ ಪುರಾಣಗಳೂ ಉದ್ಘೋಷಿಸುತ್ತವೆ. ಶೈವ ಪುರಾಣಗಳಲ್ಲಿ ಕೆಲವು ಭಿನ್ನಾಭಿಪ್ರಾಯಗಳು ಇದ್ದಾಗ್ಯೂ ಶ್ರೀರಾಮನ ಹಿರಿಮೆಯನ್ನು ಯಾರು ಅಲ್ಲಗೆಳೆದಿಲ್ಲ. ರಾಮ ನಾಮ ಮಂತ್ರ ಜಪವು ಭಾರತೀಯರೆಲ್ಲರಿಗೂ ಅಪ್ಯಾಯಮಾನವಾದ ವಿಷಯ.



# ರುದ್ರಾವತಾರಿ ಆಂಜನೇಯ

- ರಘುಸುತ.

ಸೃಷ್ಟಿಸ್ಥಿತಿಲಯಕರ್ತರಾದ ತ್ರಿಮೂರ್ತಿಗಳಲ್ಲಿ ಯಾರು ದೊಡ್ಡವರು ಯಾರು ಚಿಕ್ಕವರು ಎಂಬ ಭೇದ ಭಾವ ಇರಕೂಡದು. ಇವರು ಮೂವರೂ ಒಂದೇನೆ. ಜಗತ್ಕಲ್ಯಾಣಕ್ಕಾಗಿ ಇವರು ಮೂವರೂ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತಾರೆ. ಇವರು ಮೂವರೂ ಒಂದೇ ಎನ್ನುವುದಕ್ಕೆ ನೂರಾರು ಉದಾಹರಣೆಗಳು ಕಥಾನಕಗಳು ಪುರಾಣೇತಿಹಾಸಗಳಲ್ಲಿ ದೊರೆಯುತ್ತವೆ. ಇವರು ಮೂವರೂ ಒಬ್ಬರನ್ನು ಬಿಟ್ಟು ಮತ್ತೊಬ್ಬರಿಲ್ಲ. ವಿಷ್ಣುವಿನ ದಶಾವತಾರವಿದ್ದ ಹಾಗೆ ಶಿವನೂ ದಶಾವತಾರಿ. ಇದೇ ದಶರುದ್ರರು. ಆದರೆ ಏಕಾದಶರುದ್ರರು ಎಂಬ ಪ್ರಸಿದ್ಧಿಯೂ ಉಂಟು. ಆ ಏಕಾದಶ ರುದ್ರ ಅವತಾರವೇ ಆಂಜನೇಯ.

ವಿಷ್ಣುವಿನ ದಶಾವತಾರಗಳೊಡನೆ ಶಿವನೂ ಅವತಾರಗಳನ್ನು ಮಾಡುತ್ತ, ಆತನ ಕಾರ್ಯಗಳಲ್ಲಿ ಏಕೀಭವಿಸುತ್ತ ಜಗತ್ಕಲ್ಯಾಣ ಕಾರ್ಯವನ್ನು ಮಾಡುತ್ತಿರುತ್ತಾನೆ. ಹೀಗೆ ಹರಿಯು ರಾಮಾವತಾರ ಮಾಡಿದಾಗ ಈ ಅವತಾರದೊಡನೆ ಶಿವನೂ ಅವತಾರ ಮಾಡಿದ. ಈ ಏಕಾದಶ ಅವತಾರಿಯೇ ಆಂಜನೇಯನು. ಆಂಜನೇಯ ರುದ್ರಾವತಾರಿ ಎಂಬುದಕ್ಕೆ ರಾಮಾಯಣದಲ್ಲಿ ಅನೇಕ ಉದಾಹರಣೆಗಳಿವೆ. ಅವನು ಭಗವತ್ಸ್ವರೂಪಿ ಎಂಬುದಕ್ಕೆ ಅನೇಕ ಘಟನೆಗಳ ಆಧಾರವುಂಟು.

ಕೃಷ್ಣಾವತಾರದಲ್ಲಿ ಪರಮಾತ್ಮನ ಬಾಲಲೀಲೆಗಳು ಇರುತ್ತವೆ ಎಂಬುದು ಶಿವನಿಗೆ ತಿಳಿದಿದ್ದಿತು. ಅದರಂತೆ ತಾನೂ ಬಾಲಲೀಲೆಗಳನ್ನು ತೋರಿಸಬೇಕೆಂಬ ಆತನ ಅಪೇಕ್ಷೆ ಆಂಜನೇಯನ ಅವತಾರದಲ್ಲಿ ಪೂರ್ತಿಯಾಯಿತು.

ಆಂಜನೇಯನು ಪರಮಾತ್ಮ ಸ್ವರೂಪಿಯಾ ದುದರಿಂದ ಆತನು ತನ್ನ ವಿಶ್ವರೂಪವನ್ನು ತೋರಬಲ್ಲವನಾದ. ಸಮುದ್ರ ಲಂಘನಸಂದರ್ಭದಲ್ಲಿ, ಸೌಗಂಧಿಕಾ ಪುಷ್ಪವನ್ನು ತರುವಾಗ ಭೀಮನಿಗೆ ತನ್ನ ವಿಶ್ವರೂಪದರ್ಶನ ಮಾಡಿಸುವಲ್ಲಿ ಈತನ ಭಗವತ್ಸ್ವರೂಪವು ಸ್ಪಷ್ಟವಾಗಿ ಗೋಚರಿಸುವುದು.

ಹನುಮಂತನು ಭಗವತ್ ಸ್ವರೂಪಿಯಾದುದರಿಂದಲೇ ಆತನನ್ನು ಪೂಜೆ ಮಾಡುವುದು; ಆತನಿಗೆ ದೇವಾಲಯಗಳನ್ನು ನಿರ್ಮಿಸಿರುವುದು; ಆತನ ಅನುಗ್ರಹಕ್ಕಾಗಿ ಭಕ್ತರು ಪರಿತಪಿಸುವುದು-ಇತ್ಯಾದಿ ಸನ್ನಿವೇಶಗಳು ಉಂಟಾಗಿವೆ. ಭಗವಂತನ ಅಂಶದಿಂದ ಕೂಡಿದವುಗಳಾದರೂ ಲಕ್ಷ್ಮಣನಿಗಾಗಲೀ, ಭರತನಿಗಾಗಲೀ, ಶತ್ರುಘ್ನನಿಗಾಗಲೀ, ಸೀತಾಮಾತೆಗೇ, ಆಗಲೀ ಬೇರೆ ಯಾರಿಗೇ ಆಗಲೀ ಬೇರೆಯೇ ಆದ ಆಲಯಗಳಿಲ್ಲ. ಪ್ರತ್ಯೇಕ ಪೂಜೆಗಳು ನಡೆಯುವುದಿಲ್ಲ. ಹನುಮಂತನ ಬಗ್ಗೆ ಅಷ್ಟೋತ್ತರಗಳು, ಶತ, ಸಹಸ್ರನಾಮಗಳು - ಇತ್ಯಾದಿಯವು ಆತನ ಪರಮಾತ್ಮಾಂಶವನ್ನು ಸ್ಪಷ್ಟಪಡಿಸಿವೆ. ಈ ದೃಷ್ಟಿಯಿಂದ ರಾಮಾವತಾರದಲ್ಲಿ ಶ್ರೀರಾಮ ಮತ್ತು ಹನುಮಂತ ಇಬ್ಬರೇ ಈ ರೀತಿ ಭಕ್ತಿಗೆ ಪೂಜೆಗೆ ಅರ್ಹರಾಗಿರುವರು, ಪೂಜಿಸಲ್ಪಡುವರು. ಭರತ ಶತ್ರುಘ್ನ ಸೀತೆಯರನ್ನು ರಾಮನೊಡನೆಯೇ ಪೂಜಿಸಬೇಕು; ಬೇರೆ ಬೇರೆಯಾಗಲ್ಲ.

ಶಿವನು ವಿಷ್ಣುವನ್ನು ವಿಷ್ಣುವು ಶಿವನನ್ನು ಸ್ತೋತ್ರ ಮಾಡಿರುವ ಉದಾಹರಣೆಗಳು ಬೇಕಾದಷ್ಟಿವೆ. ಶಿವನು ವಿವಿಧ ಲೀಲಾ ವಿನೋದಗಳನ್ನು ತೋರಲು ಹನುಮಂತನ ಅವತಾರವನ್ನೆತ್ತಿ ಬಾಲ ಪ್ರತಾಪಗಳನ್ನು, ಮಹಿಮೆಗಳನ್ನು ತೋರಿದ ಬೆಳೆದು ದೊಡ್ಡವನಾದಂತೆ ಪಕ್ವಗೊಂಡ ರಾಜ ತಾಂತ್ರಿಕನಾಗಿ ರಾವಣನ ಆಸ್ಥಾನಕ್ಕೆ ಸಂಧಾನಕಾರನಾಗಿ ಶತ್ರುವಿನ ಶಕ್ತಿಯನ್ನು ಪರೀಕ್ಷಿಸುವವನಾಗಿ, ಜಯಪ್ರದ ರಾಜಕಾರಣಿಯಾಗಿ, ಚಾಣಾಕ್ಷನಾಗಿ, ಯುದ್ಧ ವಿಶಾರದನಾಗಿ ರಾಮನಷ್ಟೇ ಮಹಿಮಾನ್ವಿತನಾಗಿ ಮೆರೆದ. ಶ್ರೀಕೃಷ್ಣನಂತೆ ತತ್ವವೇತ್ತನೂ ಆದನು. ಅನೇಕ ಆದರ್ಶಗುಣಗಳನ್ನು - ಸ್ವಾಮಿಭಕ್ತಿ, ವಿನಯ ವಿದ್ವಾಸಂಪನ್ನತೆಯನ್ನು ಪ್ರದರ್ಶಿಸಿದ. ಶ್ರೀರಾಮನಷ್ಟೆ ಆದರ್ಶಗಳನ್ನು ತೋರಿಸಿದ, ಬ್ರಹ್ಮಚರ್ಯ ಪಾಲನೆಗೆ ಮಾದರಿಯಾದ.

ಶಿವನು ನಾಟ್ಯಪ್ರಿಯನು, ನೃತ್ಯಕ್ಕೆ ಮೂಲಪುರುಷನಾಗಿ ನಟರಾಜನಾದ. ಆದರೆ ಸಂಗೀತ ಹಾಗೂ ನಾದಪ್ರಿಯ ಶಿವನೆಂಬುವುದು



ಹನುಮಂತನ ರೂಪದಲ್ಲಿ ನೆರವೇರಿತು. ಆದ್ದರಿಂದಲೇ ಹನುಮ ಜಯಂತಿ, ಹನುಮಂತ ಸಂಗೀತೋತ್ಸವಗಳು ಜನಪ್ರಿಯವಾಗಿರುವುದು. ತ್ಯಾಗರಾಜರು ಸಂಗೀತ ಪ್ರಪಂಚದಲ್ಲಿ ಕಾಣಿಸಿಕೊಳ್ಳುವುದಕ್ಕೆ ಮುಂಚೆ ಶ್ರೀರಾಮನಿಗೂ ಸಂಗೀತಕ್ಕೂ ಸಂಬಂಧವಿತ್ತೊ ಇಲ್ಲವೊ ಹೇಳಲಿಕ್ಕೆ ಬರದು. ತ್ಯಾಗರಾಜರು ಪರಮರಾಮಭಕ್ತರಾದ ಕಾರಣ ಶ್ರೀರಾಮನ ಉತ್ಸವದ ನೆಪದಲ್ಲಿ ತ್ಯಾಗರಾಜರನ್ನು ನೆನೆಯುವುದು ರೂಢಿಗೆ ಬಂದು ರಾಮೋತ್ಸವಗಳನ್ನು (ಸಂಗೀತೋತ್ಸವಗಳನ್ನು) ನಡೆಸುವುದು ಪದ್ಧತಿಯಾಯಿತು. ಆದರೆ ಹನುಮಜ್ಜಯಂತಿ ಉತ್ಸವಗಳು ಬಹಳ ಹಿಂದಿನಿಂದಲೂ ರೂಢಿಯಲ್ಲಿವೆ.

ಆಂಜನೇಯ ರೂಪೀ ಶಿವನು ದರ್ಶನ ತತ್ವ ಉಪದೇಶ ಚಿಂತನಗಳು ಇತ್ಯಾದಿಗಳನ್ನು ವಿಪುಲವಾಗಿ ತೋರಿಸಿಕೊಟ್ಟಿದ್ದಾನೆ. ಅನೇಕ ಚಿಂತನೆಗಳು ಜಗತ್ ಪ್ರಸಿದ್ಧ.

ಹೀಗೆ ಹನುಮಂತನು ರುದ್ರಾವತಾರಿಯಾಗಿ ಜನಮಾನಸೋಲ್ಲಾಸದಲ್ಲಿ ಇಂದಿಗೂ ಜೀವಂತನಾಗಿದ್ದಾನೆ.

ಈ ರೀತಿಯಲ್ಲಿ ಜಗತ್ ಪಿತೃಗಳಾದ ಬ್ರಹ್ಮವಿಷ್ಣುಮಹೇಶ್ವರರು ಜಗತ್ ಕಲ್ಯಾಣಕ್ಕಾಗಿ 'ವಿಧಿಯು' ತಮಗೆ ವಿಧಿಸಿದ ಕರ್ತವ್ಯಗಳನ್ನು ಚಾಚೂ ತಪ್ಪದೆ ಪರಸ್ಪರ ಹೊಂದಾಣಿಕೆಯಿಂದ ನಡೆಸುತ್ತ ಇರುವುದು ಆದರ್ಶವಾಗಿ, ಹುಲುಮಾನವರಾದ ನಾವೂ ಅವರನ್ನು ತಪ್ಪದೆ ಅನುಸರಿಸುವುದು ಅಗತ್ಯ. ಈ ದೃಷ್ಟಿಯಲ್ಲಿ ಹನುಮಂತನು ನಮಗೆ ಆದರ್ಶವಾಗುವುದು ಸದಾ ಸರ್ವಥಾ ಸೂಕ್ತವಾದದ್ದು.

**1. ಅವತಾರ - ಜನನ:** ವಿಶ್ವಕಲ್ಯಾಣ ನಿಮಿತ್ತ ಸೇವಕ - ಸ್ವಾಮಿ ಸಂಬಂಧ, ಕರ್ತವ್ಯ ಪರಾಯಣತೆ, ಬ್ರಹ್ಮಚರ್ಯೆಯ ನಿಯಮಪಾಲನೆ, ಸದಾಚಾರ, ದುಷ್ಟತನದ ವಿರುದ್ಧ ಹೋರಾಟ, ಪರಮಾತ್ಮನಲ್ಲಿ ಅನನ್ಯಭಕ್ತಿಗಳ - ಆದರ್ಶ ಪ್ರಚಾರಕ್ಕೆ ಶಿವನು ಹನುಮಂತನ ರೂಪದಲ್ಲಿ ವಾನರ ಕುಲದಲ್ಲಿ ಅವತರಿಸಿದನು. ಈತನು ತನ್ನ ರುದ್ರತ್ವವನ್ನು ತ್ಯಜಿಸಿ ವಾನರರೂಪಿ ಹನುಮಂತನಾದುದು ಶ್ರೀರಾಮನ ಸೇವೆಯಲ್ಲಿ ಪರಮಾನಂದವನ್ನು ಪಡೆಯುವುದಕ್ಕಾಗಿ. ಇದನ್ನು ತಿಳಿದ ಬ್ರಹ್ಮನು ಜಾಂಬವಂತನ ರೂಪ ಧರಿಸಿ ಅದೇ ಶ್ರೀರಾಮ ಭಕ್ತನಾದನು. ಪುರಾಣೇತಿಹಾಸಗಳು ಹನುಮಂತನ ಜನನದ ಬಗ್ಗೆ ಹಲವು ರೀತಿಯ ವಿವರಗಳನ್ನು ನೀಡಿವೆ -

ದಶರಥನು ಪುತ್ರಕಾಮೇಷ್ಟಿ ಯಾಗಮಾಡಿದನು. ಹವನಕುಂಡದಿಂದ ಚರುತುಂಬಿದ ಪಾತ್ರೆ ಹೊರಬಂದಿತು. ಇದನ್ನು ಆತ ಮೂವರು ರಾಣಿಯರಿಗೂ ಹಂಚಿದನು. ಕೂಡಲೇ ಒಂದು ಗರುಡನು ಈ ಪಾತ್ರೆಯನ್ನು ತನ್ನ ಕೊಕ್ಕಿನಲ್ಲಿ ಹಾರಿಸಿಕೊಂಡು ಹೋಗಿ ತಪಸ್ಸು ಮಾಡುತ್ತಿದ್ದ ಅಂಜನಾದೇವಿಯ ಅಂಜಲಿಯಲ್ಲಿ ಹಾಕಿತು. ಆ ಶೇಷಭಾಗದ ಚರುವನ್ನು ಸ್ವೀಕರಿಸುವಂತೆ ಆಕಾಶವಾಣಿಯು ಆದೇಶ ನೀಡಿತು. ಇದರ ಪ್ರಭಾವದಿಂದ ಹನುಮಂತನು ಜನಿಸಿದ. ಇದೊಂದು ಕಥಾನಕ.

ಅಮೃತ ಮಥನವಾದ ಮೇಲೆ ಅಮೃತ ವಿತರಣೆಯ ಸಂದರ್ಭದಲ್ಲಿ ಸರ್ವಸುಂದರಿ ಆದ ಮೋಹಿನಿಯನ್ನು ಕಂಡು ಪರಶಿವನೂ ಆಕರ್ಷಿತನಾದನಂತೆ. ಆಗ ಆತನಿಂದ ಸ್ಖಲಿತವಾದ ಆತನ ತೇಜಸ್ಸಿನ ಬಗ್ಗೆ ದೇವತೆಗಳು ಆಸಕ್ತರಾಗಿ ಅದನ್ನು ಗೌತಮರ ಪುತ್ರಿ ಅಂಜನಾಳ ಗರ್ಭದಲ್ಲಿ ಸ್ಥಾಪಿಸಲಾಯಿತು. ಇದನ್ನು ನಡೆಸಿಕೊಟ್ಟವನು ವಾಯುದೇವ. ಆದ್ದರಿಂದಲೇ ವಾಯುವಿನಷ್ಟೇ ಶಕ್ತಿಶಾಲಿ, ಪರಾಕ್ರಮಿ ಹನುಮಂತನು ಜನಿಸಿದನು. ಈ ವಿಚಾರವನ್ನು ವಾಯುಪುರಾಣದಲ್ಲಿ ಹೀಗೆ ಹೇಳಲಾಗಿದೆ.

ಅಂಜನೀ ಗರ್ಭ ಸಂಭೂತೋ
ಹನುಮಾನ್ ಪವನಾತ್ಮಜಃ ।
ಯದಾ ಜಾತಾ ಮಹಾದೇವೋ
ಹನುಮಾನ್ ಸತ್ಯವಿಕ್ರಮಃ ॥

ಸ್ಕಂದಪುರಾಣದಲ್ಲಿ ಹೀಗೆ ಹೇಳಲಾಗಿದೆ-

ಯೋ ವೈ ಚೈಕಾದಶೋ ರುದ್ರೋ
ಹನುಮಾನ್ ಸ ಮಹಾಕಪಿಃ ।
ಅವತೀರ್ಣಃ ಸಹಾಯಾರ್ಥಂ
ವಿಷ್ಣೋರಮಿತ ತೇಜಸಃ ॥

- ಅಂದರೆ ಹನ್ನೊಂದನೇ ರುದ್ರನಾದ ಮಹಾನ್ ಕಪಿ ಹನುಮಂತನು ಅಮಿತ ತೇಜಸ್ವಿಯಾದ ವಿಷ್ಣುವಿಗೆ (ಶ್ರೀರಾಮನಿಗೆ) ಸಹಾಯಕ್ಕಾಗಿ ಅವತರಿಸಿದನು. ಅಗಸ್ತ್ಯ ಸಂಹಿತೆಯಲ್ಲಿ ಈ ವಿಚಾರವನ್ನು ಹೀಗೆ ವಿವರಿಸಿದೆ -

ಊರ್ಜೇ ಕೃಷ್ಣ ಚತುರ್ದಶ್ಯಾಂ
ಭೌಮೇ ಸ್ವಾತ್ಯಾಂ ಕಪೀಶ್ವರಃ ।
ಮೇಷ ಲಗ್ನೇಽಂ ಜನಾ ಗರ್ಭಾತ್
ಪ್ರಾದುರ್ಭೂತಃ ಸ್ವಯಂ ಶಿವಃ ॥

- ಕಾರ್ತೀಕಮಾಸದ ಕೃಷ್ಣಪಕ್ಷದ ಚತುರ್ದಶಿ ತಿಥಿಯ ಮಂಗಳವಾರದ ಸ್ವಾತಿ ನಕ್ಷತ್ರದಲ್ಲಿ ಮೇಷ ಲಗ್ನದ ಉದಯಕಾಲದಲ್ಲಿ ಅಂಜನಾಳ ಗರ್ಭದಿಂದ ಸಾಕ್ಷಾತ್ ಶಿವನು ಕಪೀಶ್ವರನ ರೂಪದಲ್ಲಿ ಜನಿಸಿದನು.

ತ್ರಿಪುರಾಸರ ಸಂಹಾರಕ್ಕೆ ಮೊದಲು ದೇವತೆಗಳು ಶಿವನ ಅನಂತ ಮಹಿಮೆಯನ್ನು ಹನುಮಂತನ ರೂಪದಲ್ಲಿ ವರ್ಣಿಸಿ ಸ್ತೋತ್ರಮಾಡಿದರೆಂದು ಶಿವಪುರಾಣ ತಿಳಿಸುತ್ತದೆ-

ಆದಿತ್ಯಾನಾಂ ವಾಸುದೇವೋ
ಹನುಮಾನ್ ವಾನರೇಷು ಚ ।

ಹೇ ಶಿವನೆ - ನೀನು ಆದಿತ್ಯರಲ್ಲಿ ವಾಸುದೇವನು, ವಾನರರಲ್ಲಿ ಹನುಮಂತನು.

ಪಾರ್ವತೀ ಪರಮೇಶ್ವರರು ಕೈಲಾಸದಲ್ಲಿ ಕ್ರೀಡಿಸುತ್ತಿದ್ದಾಗ ಎರಡು ಕಪಿಗಳನ್ನು ಕಂಡರು. ಪಾರ್ವತಿ ಗರ್ಭವನ್ನು ಧರಿಸಿದಳು. ಆಕೆ ಅದನ್ನು ತಡೆದುಕೊಳ್ಳಲಾರದೆ ಶಿವನಿಗೆ ತಿಳಿಸಿದಳು. ಆಕೆಯ ನಾಭಿ ಪ್ರದೇಶದಿಂದ ಅದು ಹೊರಬೀಳುವಂತೆ ಶಿವನು ಮಾಡಿದನು. ಭೂದೇವಿಯೂ ಕೂಡ ಆ ಭಾರವನ್ನು ತಡೆಯಲಾರದಾದಳು. ಆಗ ಗೌತಮ ಪುತ್ರಿಯಾದ ಅಂಜನೆಯು ಪುತ್ರಾಪೇಕ್ಷೆಯಿಂದ ತಪಸ್ಸು ಮಾಡುತ್ತಿದ್ದಳು. ಅದೇ ಸಮಯದಲ್ಲಿ ವಾಯುವು ಅವಳ ರೂಪಕ್ಕೆ ಮರುಳಾಗಿದ್ದ. ಆಕೆಯ ಅಭೀಷ್ಟವನ್ನು ಪೂರೈಸಲು ವಾಯುವು ಪಾರ್ವತಿಯ ಗರ್ಭವನ್ನು ಆಕೆಯ ಕೈಯಲ್ಲಿರಿಸಿದ. ಅವಳು ಅದನ್ನು ನುಂಗಿದಳು. ನವಮಾಸ ಕಳೆದ ನಂತರ ಆಕೆ ಹನುಮಂತನಿಗೆ ಜನ್ಮನೀಡಿದಳು.

**2. ಬಾಲಲೀಲೆಗಳು :** ಶ್ರೀಕೃಷ್ಣನು ತೋರಿಸಿದಷ್ಟು ಬಾಲಲೀಲೆಗಳು ಹನುಮಂತನಲ್ಲಿ ಇಲ್ಲವಾದರೂ ತಕ್ಕ ಮಟ್ಟಿಗಿದ್ದು ಇವೆಲ್ಲ ಬಾಲ್ಯ ಚಾಪಲ್ಯದಿಂದಾದವು.

ಆಂಜನೇಯನು ಹುಟ್ಟಿದ ಕೂಡಲೇ ಸೂರ್ಯನನ್ನು ನೋಡಿ ಒಂದು ಹಣ್ಣು ಎಂದು ಭಾವಿಸಿ ಅದನ್ನು ನುಂಗಲು ಹಾರಿದನು. ಇದು ಅನರ್ಥಕ್ಕೆ ದಾರಿಯಾಗುತ್ತದೆ ಎಂದು ಭಾವಿಸಿದ ಇಂದ್ರನು ವಜ್ರಾಯುಧದಿಂದ ಬಾಲಾಂಜನೇಯನ ಮುಖಕ್ಕೆ ಹೊಡೆದನು. ಇದರಿಂದಾಗಿ ಬಾಲಕನ ಮುಖವು ಜಜ್ಜಿಹೋಗಿ ಮುಖವು ಸೊಟ್ಟಗಾಯಿತು. ಆ ಕೂಡಲೇ ಅವನು ಮೂರ್ಛೆ ಹೋದನು. ಇದನ್ನು ಕಂಡು ವಾಯುವು ಪುತ್ರಶೋಕದಿಂದ ತನ್ನ ಸಂಚಾರವನ್ನೇ ನಿಲ್ಲಿಸಿದ. ಆಗ ಇಂದ್ರಾದಿ ದೇವತೆಗಳು ವಾಯುವನ್ನು ಸಂತೈಸಿ, ಆಂಜನೇಯನಿಗೆ ಸ್ವೇಚ್ಛಾಮರಣವನ್ನೂ, ವಾಯುವಿಗೆ ಸಮನಾದ ವೇಗವನ್ನೂ ಬಲವನ್ನೂ ಅನುಗ್ರಹಿಸಿದರು. ಇದೇ ಸಮಯದಲ್ಲಿ ಬ್ರಹ್ಮನು ಕೂಡ ಇನ್ನು ಮುಂದೆ ಯಾವುದೇ ಆಯುಧದಿಂದ ಮರಣವು ಬರದಿರಲಿ ಎಂದು ವರವನ್ನಿತ್ತು ಆಂಜನೇಯನನ್ನು ಎಚ್ಚಿಸಿದನು. ಆಂಜನೇಯನು ಅಂದಿನಿಂದ ಹನುಮಂತನಾದನು.

ಬಾಲ ಆಂಜನೇಯನು ತುಂಬ ಚೇಷ್ಟೆ ಮಾಡುತ್ತಿದ್ದನು. ಋಷ್ಯಾಶ್ರಮಗಳನ್ನು ಹೊಕ್ಕು ಅಲ್ಲಿ ಇಲ್ಲದ ಕೀಟಲೆ ಮಾಡುತ್ತಿದ್ದನು. ಅವರು ಇದರಿಂದಾಗಿ ರೋಸಿಹೋದರು. ಆದರೂ ಭವಿಷ್ಯದಲ್ಲಿ ಈತನಿಂದ ಮಹತ್ತರವಾದ ಕಾರ್ಯಗಳು ನಡೆಯುವುದೆಂದು ತಿಳಿದಿದ್ದ ಅವರು 'ನಿನ್ನ ಶಕ್ತಿಯ ಅರಿವು ನಿನಗೆ ಉಂಟಾಗದಿರಲಿ, ಬೇರೆಯವರು ತಿಳಿಸಿದಾಗ ಮಾತ್ರವೇ ತಿಳಿಯುವಂತಾಗಲಿ - ನಿನ್ನ ಶಕ್ತಿಯ ಅರಿವು ಶ್ರೀರಾಮದರ್ಶನದ ವರೆಗೆ ಆಗದೆಯೇ ಇರಲಿ' ಎಂದು ಶಪಿಸಿದರು. ಅಂದಿನಿಂದ ಅವನ ಚೇಷ್ಟೆಗಳು ಕಡಿಮೆಯಾಯಿತು.

**3. ವಿದ್ಯಾಭ್ಯಾಸ :** ಹನುಮಂತನಿಗೆ ತಾನೂ ಇತರರಂತೆ ಸುಶಿಕ್ಷಿತನಾಗಬೇಕೆಂಬ ಆಸೆಯಾಯಿತು. ಏನು ಮಾಡಬೇಕೆಂದು ತಾಯಿಯನ್ನು ಕೇಳಿದ. ಆತನ ಶಕ್ತಿ ಸಾಮರ್ಥ್ಯಗಳನ್ನು ತಿಳಿದಿದ್ದ ಅಂಜನೆ ಸೂರ್ಯನ ಬಳಿ ಶಿಕ್ಷಣ ಪಡೆಯಲು ತಿಳಿಸಿದಳು. ಹನುಮಂತನು ಸೂರ್ಯನ ಬಳಿಸಾರಿ ತನಗೆ ಗುರುವಾಗಿ ಉಪದೇಶ ಮಾಡಬೇಕೆಂದು ಪ್ರಾರ್ಥಿಸಿದ. ಅವನ ವಿನಮ್ರತೆಯನ್ನು ಕಂಡು ಸಂತೋಷಗೊಂಡ ಸೂರ್ಯನು ಒಪ್ಪಿ; ತನ್ನೊಂದಿಗೆ ಬರಲು ತಿಳಿಸಿದ. ಹನುಮಂತ ಸೂರ್ಯನೊಡನೆ ತಾನೂ ಸಂಚರಿಸುತ್ತ ಬಹುಕಾಲದವರೆಗೆ ಸಹನೆ ವಿನಯ ನಮ್ರತೆಗಳಿಂದ ಗುರುಸೇವೆ ಮಾಡಿ, ಸಕಲ ವಿದ್ಯೆಗಳಲ್ಲಿ ಪಾರಂಗತನಾದನು. ಗುರುವಿನಿಂದಲೇ ಪ್ರಶಂಶಿಸಲ್ಪಟ್ಟನು.

ಈಗ ಹನುಮಂತನು ಪ್ರಬುದ್ಧನಾಗಿದ್ದ. ಅವನನ್ನು ಕಂಡು ಸಂತೋಷದಿಂದ ಸೂರ್ಯನು 'ವಾಲಿಯು ಮದಾಂಧನಾಗಿ ತಮ್ಮನ ಹೆಂಡತಿಯನ್ನು ಅಪಹರಿಸಿ ತಮ್ಮನನ್ನು ರಾಜ್ಯದಿಂದ ಹೊರಹಾಕಿದ್ದಾನೆ. ನೀನು ತಮ್ಮನಾದ ಸುಗ್ರೀವನ ಸಹಾಯಕನಾಗಿರು' ಎಂದು ಹೇಳಿಕಳುಹಿಸಿದನು.

ಹನುಮಂತನು ಋಷ್ಯಮೂಕ ಪರ್ವತದಲ್ಲಿದ್ದ ಸುಗ್ರೀವನ ಬಳಿ ಸೇರಿದನು. ಅವನಿಗೆ ಮಂತ್ರಿಯಾಗಿ ಅವನಿಗೆ ರಾಜ್ಯದೊರೆಯುವವರೆಗೂ ಅವನೊಡನೆ ಇದ್ದ. ರಾವಣ ವಧೆಯ ನಂತರ ರಾಮನೊಡನೆ ಅಯೋಧ್ಯೆಯನ್ನು ಸೇರಿದನು.

**4. ಸಂಧಾನಕಾರ ಹಾಗೂ ರಾಜನೀತಿ ನಿಪುಣ :** ಹನುಮಂತನು ಉತ್ತಮ ರಾಜನೀತಿ ನಿಪುಣ. ರಾಮ ಲಕ್ಷ್ಮಣರು ಹೊಸಬರಾದರೂ ಅವರನ್ನು ಕಂಡು ಮಾತನಾಡಿ, ಅವರ ನೈಜತೆಯನ್ನು ತಿಳಿದು ಸುಗ್ರೀವನಲ್ಲಿಗೆ ಕರೆದುಕೊಂಡು ಹೋಗಿ ರಾಮನಿಗೂ ಸುಗ್ರೀವನಿಗೂ ಸ್ನೇಹ ಬೆಳೆಯುವಂತೆ ಮಾಡಿದನು. ಕಿಷ್ಕಿಂಧಾಕಾಂಡದ 2 ನೇ ಅಧ್ಯಾಯದಲ್ಲಿ ಸುಗ್ರೀವನಿಗೆ ಹನುಮಂತನು ರಾಜನೀತಿಯ ಬಗ್ಗೆ ಉಪದೇಶ ಮಾಡಿದ್ದಿದೆ. ವಿಭೀಷಣನು ಶ್ರೀರಾಮನ ಸ್ನೇಹ ಬಯಸಿ ಬಂದಾಗಲೂ ಈತನೇ, ಅವರಿಬ್ಬರ ನಡುವೆ ಸ್ನೇಹವನ್ನು ಕುದುರಿಸಿದ. ಲಂಕಾದಹನದ ನಂತರ ಸೆರೆಸಿಕ್ಕಿ ರಾವಣನ ಆಸ್ಥಾನದಲ್ಲಿ ಓರ್ವ ಸಂಧಾನಕಾರನಾಗಿ ಸನ್ನಿವೇಶವನ್ನು ನಿರ್ವಹಿಸಿದ ರೀತಿ ಮೆಚ್ಚುಗೆ ಪಡೆಯುತ್ತದೆ. ಇವನ ನೇತೃತ್ವದಲ್ಲಿ ಅಂಗದನು ಒಬ್ಬ ರಾಜನೀತಿ ನಿಪುಣನಾಗಿ ಸಂಧಾನಕಾರನಾಗಿ ರೂಪುಗೊಂಡ. ಇದೇ ರೀತಿಯಲ್ಲಿ ಸೀತೆಯಿಂದಲೂ ಬ್ರಹ್ಮ ವಿದ್ಯೆಯ ಬಗ್ಗೆ ವಿಷಯಗಳ ಸಂಗ್ರಹಣೆ ಮಾಡಿದ.

**5. ವೀರ, ಪರಾಕ್ರಮ :** ವಾಲ್ಮೀಕಿ ರಾಮಾಯಣದ ಕಿಷ್ಕಿಂಧಾ, ಸುಂದರ ಕಾಂಡಗಳೆರಡರಲ್ಲಿಯೂ ಹನುಮಂತನೇ ಮುಖ್ಯ ಪಾತ್ರಧಾರಿ. ಸುಂದರ ಕಾಂಡವಂತೂ ಪೂರ್ತಿಯಾಗಿ ಹನುಮಂತನೇ. ಅದನ್ನು ಹನುಮಂತ ಕಾಂಡ ಎಂದೇ ಕರೆಯಬೇಕು. ಕವಿ, ಶಿವ ಪದಗಳು ಸುಂದರ ಪದಕ್ಕೆ ಪರ್ಯಾಯವೂ ಹೌದು. ಆದ್ದರಿಂದಲೇ ವಾಲ್ಮೀಕಿ ಇದನ್ನು ಸುಂದರಕಾಂಡವೆಂದರು. ಹನುಮಂತನ ಪರಾಕ್ರಮ ಸಾಹಸಗಳ ಪೂರ್ತಿ ವಿವರಗಳನ್ನು ವಾಲ್ಮೀಕಿ ನೀಡಿದ್ದಾರೆ. ಅಗಸ್ತ್ಯಮಹರ್ಷಿಯೊಡನೆ ವಾರ್ತಾಲಾಪ ಮಾಡುತ್ತ ಶ್ರೀರಾಮನು -

ಅತುಲಂ ಬಲಮೇತದ್ ವೈ
ವಾಲಿನೋ ರಾವಣಸ್ಯ ಚ ।
ನತ್ವೇ ತಾಭ್ಯಾಂ ಹನುಮತಾ
ಸಮಂ ತ್ವಿತಿ ಮತಿರ್ಮಮ ॥

-ವಾಲಿ ಮತ್ತು ರಾವಣರ ಬಲ ಅಸಮಾನವಾದ್ದು. ಇದರಲ್ಲಿ ಸಂದೇಹವೇ ಇಲ್ಲ. ಆದರೆ ನನ್ನ ಅಭಿಪ್ರಾಯದಲ್ಲಿ ಈ ಇಬ್ಬರ ಸಮ್ಮಿಳಿತ ಶಕ್ತಿಗಳಿಗಿಂತಲೂ ಹನುಮಂತನ ಶಕ್ತಿ ಹೆಚ್ಚಿನದು. ಅವರಿಬ್ಬರ ಬಲವೂ ಹನುಮ ಶಕ್ತಿಗೆ ಸಮನಲ್ಲ.

ಇನ್ನೊಂದು ಕಡೆ ಹೀಗೆ ಹೇಳುತ್ತಾನೆ- ಶೌರ್ಯ, ದಕ್ಷತೆ, ಬಲ, ಧೈರ್ಯ, ಪಾಂಡಿತ್ಯ, ನೀತಿ ಬದ್ಧತೆ ಪರಾಕ್ರಮ ಹಾಗೂ ಪ್ರಭಾವ ಬೀರುವಿಕೆಗಳಲ್ಲಿ ಹನುಮಂತನು ತನ್ನದೇ ಆದ ವೈಶಿಷ್ಟ್ಯ ಹೊಂದಿದ್ದಾನೆ. ಇನ್ನೊಂದು ಕಡೆಯಲ್ಲಿ ರಾಮನು ಪ್ರಶಂಸಿದ್ದು ಹೀಗೆ-

ನ ಕಾಲಸ್ಯ ನ ಶಕ್ರಸ್ಯ
ವಿಷ್ಣೋರ್ವಿತ್ತಪಸ್ಯ ಚ ।
ಕರ್ಮಾಣಿ ತಾನಿ ಶ್ರೂಯಂತೇ
ಯಾನಿಯಾನಿ ಹನೂಮತಃ ॥

ಎಂದರೆ ಯುದ್ಧದಲ್ಲಿ ಹನುಮಂತನ ಪರಾಕ್ರಮವು ನೋಡತಕ್ಕದ್ದು ಇಂತಹ ಪರಾಕ್ರಮವು ಯಾವ ಇಂದ್ರ, ಯಮ, ವಿಷ್ಣು ಕುಬೇರರಿಂದಲೂ ಹೊರಬರುವಂತಹದಲ್ಲ.

''ನನಗೆ ಲಂಕೆಯಲ್ಲಿ ವಿಜಯ ಪ್ರಾಪ್ತಿಯಾಗುವುದರೊಂದಿಗೆ ಸೀತೆ, ಲಕ್ಷ್ಮಣ, ರಾಜ್ಯ ಮಿತ್ರರು ಹಾಗೂ ಇತರೇ ಬಂಧುಜನರು ಪ್ರಾಪ್ತವಾದುದು ಹನುಮಂತನ ಬುದ್ಧಿ ಬಲಗಳ ಪ್ರತಾಪದಿಂದಲೇನೆ - ಇದಕ್ಕಾಗಿ ಆತನಿಗೆ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು.''

ಇದಕ್ಕೆ ಅನುಗುಣವಾಗಿ ಅಗಸ್ತ್ಯರೂ ಒಂದು ಉದಾಹರಣೆ ನೀಡಿ ಹನುಮಂತನ ಮಿತ್ರತ್ವ, ಸೇವೆ, ಸ್ನೇಹ, ಪಾಂಡಿತ್ಯ, ಬುದ್ಧಿವಂತಿಕೆಗಳ ಅಸಮಾನತೆಯನ್ನು ವಿವರಿಸಿದ್ದಾರೆ.

ಪರಾಕ್ರಮೋತ್ಸಾಹಮತಿ ಪ್ರತಾಪೈಃ
ಸೌಶೀಲ್ಯ ಮಾಧುರ್ಯ ನಯಾ ನಯೈಶ್ಚ।
ಗಾಂಭೀರ್ಯ ಚಾತುರ್ಯ
ಸುವೀರ್ಯ ಧೈರ್ಯಂ
ಹನುಮತಃ ಕೋಪ್ಯಧಿಕೋಸ್ತಿ ಲೋಕೇ ॥

- ಪರಾಕ್ರಮ, ಉತ್ಸಾಹ, ಬುದ್ಧಿ ಪ್ರತಾಪ, ಸೌಶೀಲ್ಯ, ಮಾಧುರ್ಯ, ನೀತಿ ಅನೀತಿಗಳ ವಿವೇಕ, ಗಾಂಭೀರ್ಯ, ಚಾತುರ್ಯ, ಉತ್ತಮಬಲ, ಧೈರ್ಯಗಳಲ್ಲಿ ಹನುಮಂತನನ್ನು ಮೀರಿಸಿದವರು ಈ ಪ್ರಪಂಚದಲ್ಲಿ ಯಾರೂ ಇಲ್ಲ.

**6. ಭಗವತ್ ಸ್ವರೂಪ :** ಶ್ರೀಕೃಷ್ಣನಂತೆ ಹನುಮಂತನೂ ತನ್ನ ಭಗವತ್ಸ್ವರೂಪವನ್ನು ಪ್ರಕಟಿಸಿದ್ದಾನೆ. ಅಹಿರಾವಣ ಮಹಿರಾವಣ ರೊಂದಿಗಿನ ಕಾಳಗದ ಸಮಯದಲ್ಲಿ ಅವರ ಪ್ರಾಣಗಳು ಇದ್ದ ಜೀರುಂಡೆಗಳನ್ನು ನಾಶಮಾಡುವಾಗ ಪಂಚಮುಖಿ ಆಂಜನೇಯ ಆಗಿ ಅವುಗಳನ್ನು ನಾಶಮಾಡಿದನು. ಅಂತೆಯೇ ಆ ರಾಕ್ಷಸರನ್ನು ಅಂತ್ಯಗೊಳಿಸಿದನು.

ಲಂಕೆಯನ್ನು ತಲುಪುವುದಕ್ಕೆ ಮುನ್ನ ಬೃಹದ್ದೇಹಿಯಾಗಿ ಸಮುದ್ರವನ್ನು ಉಲ್ಲಂಘಿಸಿದ್ದು ಈತನ ಭಗವತ್ ಸ್ವರೂಪಕ್ಕೆ ಸಾಕ್ಷಿ. ಇದೇ ರೀತಿಯಲ್ಲಿ ಸೌಗಂಧಿಕಾಪುಷ್ಪವನ್ನು ತರಲು ಹೊರಟ ಭೀಮಸೇನನಿಗೆ ತನ್ನ ವಿಶ್ವರೂಪ ತೋರಿಸುತ್ತಾನೆ.

ಒಮ್ಮೆ ಶ್ರೀರಾಮನು ಕೋಸಲದ ಪೌರರಿಗೆ ಔತಣವೇರ್ಪಡಿಸಿದನು. ಆ ಸಂದರ್ಭದಲ್ಲಿ ಹನುಮಂತನು ಬಹಳವಾಗಿ ಓಡಾಡಿ ಆಯಾಸಗೊಂಡನು. ಸೀತಾಮಾತೆಯು ಅವನನ್ನು ಕೂಡಿಸಿ ಊಟಕ್ಕೆ ಬಡಿಸತೊಡಗಿದ್ದಳು. ಆದರೆ ಅಡಿಗೆ ಮನೆ ಖಾಲಿಯಾಗತೊಡಗಿತಷ್ಟೆ ಹೊರತು ಹನುಮಂತ ಊಟ ಮುಗಿಸಲಿಲ್ಲ. ಸೀತೆ ರಾಮನಬಳಿಗೆ ಬಂದು ಸಮಸ್ಯೆಯನ್ನು ಹೇಳಿಕೊಂಡಳು. ರಾಮನು ನಕ್ಕು-

''ಯಾಕೆ ಅವನು ಪರಮೇಶ್ವರಸ್ವರೂಪಿ ಎಂಬುದು ತಿಳಿದಿಲ್ಲವೇ? ಪರಿಸ್ಥಿತಿಯನ್ನು ನೀನೇ ನಿಭಾಯಿಸು'' ಎಂದು ಹೇಳಿದ. ಹಿಂದಿರುಗಿ ಬಂದು ಊಟ ಮಾಡುತ್ತ ಕುಳಿತ ಹನುಮನ ಹಿಂದೆ ಬಂದು ನಿಂತ ಸೀತೆಯು ''ಪರಮೇಶ್ವರ ತೃಪ್ತನಾಗು ತಂದೆ'' ಎಂದು ಪಂಚಾಕ್ಷರಿ ಮಂತ್ರವನ್ನು ಜಪಿಸಿದಳು. ಕೂಡಲೇ ಹನುಮಂತನು ತೃಪ್ತಿಯಿಂದ ತೇಗಿದನು.



**7. ಸಾಹಸಗಳು :** ಸುಂದರಕಾಂಡ ಯುದ್ಧಕಾಂಡಗಳಲ್ಲಿ ಹನುಮಂತನ ಸಾಹಸಗಳ ಸರಮಾಲೆಯನ್ನು ಕಾಣಬಹುದು. ನೂರಾರು ಸನ್ನಿವೇಶಗಳು ಇವಕ್ಕೆ ಉದಾಹರಣೆಗಳಿವೆ.

**8. ಬುದ್ಧಿವಂತಿಕೆ :** ಹನುಮಂತನ ಬುದ್ಧಿವಂತಿಕೆಯನ್ನು ಒರೆಗೆ ಹಚ್ಚುವ ಉದಾಹರಣೆಗಳೂ ಬೇಕಾದಷ್ಟಿವೆ. ಲಕ್ಷ್ಮಣನು ಮೂರ್ಛೆಹೋದಾಗ ಮಹೌಷಧವನ್ನು ತರಲು ಹೋಗಿ ತಡವಾಗಬಾರದೆಂದು ಇಡೀ ಬೆಟ್ಟವನ್ನೇ ಹೊತ್ತು ತಂದದ್ದು ಒಂದು ಉತ್ತಮ ಸನ್ನಿವೇಶ. ರಾವಣನ ಆಸ್ಥಾನದಲ್ಲಿ ಅವನ ಆಕ್ಷೇಪಣೆಗಳಿಗೆ ಸೂಕ್ಷ್ಮ ಉತ್ತರಗಳನ್ನು ನೀಡುವನು.

ಇದೇ ರೀತಿಯಲ್ಲಿ ಭರತನ ಅಗ್ನಿ ಪ್ರವೇಶವನ್ನು ತಡೆಯುವನು. ಬಾಲಕ **ಲವ ಕುಶರನ್ನು** ರಾಮನ ಆಸ್ಥಾನಕ್ಕೆ ಕರೆತಂದು ತಂದೆ ಮಕ್ಕಳ ಸಮಾವೇಶವೇರ್ಪಡಿಸಿದ್ದು ಇಂತಹ ಮತ್ತೊಂದು ಸನ್ನಿವೇಶ. ಲಂಕಾ ಪ್ರವೇಶ ಸಮಯದಲ್ಲಿ ಬಾಗಿಲ ಮೂಲಕ ಒಳಹೋಗದೆ ಗೋಡೆ ಹಾರಿ ಒಳಹೋಗುವುದು, ಲಂಕಾಪ್ರವೇಶ ಮಾಡುವ ಸಂದರ್ಭದಲ್ಲಿ ಎಡಗಾಲನಿಟ್ಟು ಒಳಹೋಗುವುದು - ಇವೆಲ್ಲ ಅವನ ಚಾಣಾಕ್ಷ ಬುದ್ಧಿಯ ಉದಾಹರಣೆಗಳು.

ಇಷ್ಟೇ ಅಲ್ಲ ಶ್ರೀರಾಮನಿಂದ ಇವನಿಗೆ ಬ್ರಹ್ಮಪಟ್ಟ ಲಭಿಸುವುದು. ಕಲ್ಪಾಂತದ ವರೆಗೆ ಬದುಕಿರುವ ಆಶೀರ್ವಾದ ಪಡೆಯುವನು.

**9. ಪ್ರಾರ್ಥನೆಗಳು :** ಶ್ರೀರಾಮನೇ ಮೊದಲಾದವರಿಂದ ಪ್ರಶಂಸೆಗಳು, ಗೌತಮನೇ ಮೊದಲಾದವರಿಂದ ಪ್ರಾರ್ಥನೆಗಳನ್ನು ಪಡೆದ ಹನುಮಂತನನ್ನು ರಾಮಾಯಣ ಸಮಯದಲ್ಲಿ ಸ್ತುತಿಯನ್ನು ಕೃಷ್ಣನಂತೆ ಪಡೆಯಲಿಲ್ಲವಾದರೂ ನಂತರದ ಕಾಲದಲ್ಲಿ ಆತನ ಮಹಿಮೆಗಳನ್ನು ಭಕ್ತರು ವೈವಿಧ್ಯಮಯವಾಗಿ ವರ್ಣಿಸಿ ಪ್ರಾರ್ಥನೆಗಳನ್ನು ಸಲ್ಲಿಸಿದ್ದಾರೆ. ಅವುಗಳಲ್ಲಿ ಹನುಮಾನ್ ಚಾಲೀಸವನ್ನು ಬರೆದ ತುಲಸೀದಾಸರು ಪ್ರಮುಖರು. ಅವರು ರಾಮಚರಿತಮಾನಸದಲ್ಲಿ ಹಲವಾರು ಪ್ರಾರ್ಥನಾಗೀತೆಗಳ ರಚನೆ ಮಾಡಿದ್ದಾನೆ.

ಅತುಲಿತ ಬಲಧಾಮಂ
ಹೇಮಶೈಲಾಭದೇಹಂ।
ದನುಜ ವನ ಕೃಶಾನುಂ
ಜ್ಞಾನಿನಾಮಗ್ರಗಣ್ಯಂ ॥

ಸಕಲ ಗುಣ ನಿಧಾನಂ
ವಾನರಾಣಾಮಧೀಶಂ।
ರಘುಪತಿ ಪ್ರಿಯಭಕ್ತಂ
ವಾತಜಾತಂ ನಮಾಮಿ ॥ (ರಾ.ಚ.ಮಾ.)

ಮನೋಜವಂ ಮಾರುತ ತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ
ವಾತಾತ್ಮಜಂ ವಾನರಯೂಥ ಮುಖ್ಯಂ
ಶ್ರೀರಾಮ ದೂತಂ ಶಿರಸಾ ನಮಾಮಿ

ಸೀತಾರಾಮ ಗುಣಗ್ರಾಮ
ಪುಣ್ಯಾರಣ್ಯ ವಿಹಾರಿಣೇ।
ವಂದೇ ವಿಶುದ್ಧ ವಿಜ್ಞಾನೌ
ಕವೀಶ್ವರ ಕಪೀಶ್ವರೌ ॥

ಜನ್ಮಾಂತರ ಕೃತಂ ಪಾಪಂ
ವ್ಯಾಧಿರೂಪೇಣ ಬಾಧತೇ।
ತತ್ ಶಾಂತಿ ರೌಷಧ ಪ್ರಾಶೈ
ರ್ಜಪಹೋಮ ಸುರಾರ್ಚನೈಃ॥

# ಮಹಾ ಧನ್ವಂತರಿ ಆಂಜನೇಯ

- ಆದ್ಯ ರಾಮಾಚಾರ್ಯ.

ವೇದಸಮೂಹಗಳಲ್ಲಿ ಆಯುರ್ವೇದವನ್ನು ಉಪವೇದ ರೂಪದಲ್ಲಿ ಗ್ರಹಿಸಲಾಗಿದೆ. ಮಹರ್ಷಿ ಶೌನಕರಿಂದ ರಚಿತವಾದ ''ಚರಣವ್ಯೂಹ'' ಎಂಬ ಭಾಗದಲ್ಲಿ ಋಗ್ವೇದ ಹಾಗೂ ಶುಶ್ರುತ (ಪುಟ 4) ಇವುಗಳಲ್ಲಿ ಆಯುರ್ವೇದವನ್ನು ಅಥರ್ವವೇದದ ಉಪವೇದವೆಂದು ಹೇಳಲಾಗಿದೆ. ಮಾನವನ ಆಯುಷ್ಯದ ರಕ್ಷಣೆ ಹಾಗೂ ಆಯುಷ್ಯದ ಅಭಿವೃದ್ಧಿ ಇವುಗಳ ಉಪಾಯವನ್ನು ತಿಳಿಸಲಾಗಿದೆ.

ರಾಮದೂತ ಆಂಜನೇಯನನ್ನು ಅಮರನೆಂದು ಗುರುತಿಸಲಾಗುವುದು. ಭಾರತೀಯ ಶಾಸ್ತ್ರದಲ್ಲಿ ಎಂಟು ಜನ ಚಿರಂಜೀವಿಗಳ ವರ್ಣನೆಯು ಕಾಣಿಸಿಗುತ್ತದೆ. ಈ ಎಂಟು ಜನರಲ್ಲಿ ಅಂಜನಾಪುತ್ರನಾದ ಮಾರುತಿಯು ಅಗ್ರಮಾನ್ಯನಾಗಿದ್ದಾನೆ. ಜಗನ್ಮಾತೆಯಾದ ಸೀತಾದೇವಿಯ ವರದಾನವೇ ಈತನ ಅಗ್ರಮಾನ್ಯತೆಗೆ ಮೂಲ ಕಾರಣವೆನ್ನುತ್ತಾರೆ. ಇನ್ನು ಎರಡನೆಯ ಕಾರಣವೆಂದರೆ ಆತನ ಬ್ರಹ್ಮಚರ್ಯ. ''ಮರಣಂ ಬಿಂದುಪಾತೇನ ಜೀವನಂ ಬಿಂದು ಧಾರಣಂ'' ಎಂಬುದಾಗಿ ಶಾಸ್ತ್ರವು ತಿಳಿಸುತ್ತದೆ.

ಜ್ಞಾನಿಗಳಲ್ಲಿ ಆಂಜನೇಯನನ್ನು ಮಹಾಜ್ಞಾನಿ ಎಂದು ವರ್ಣಿಸಲಾಗಿದೆ. ಆತನು ಆಯುರ್ವೇದ ದಲ್ಲಿಯೂ ಮಹಾ ಪಂಡಿತನೆಂದೆನಿಸಿ ಕೊಂಡಿದ್ದಾನೆ. ರಾಮ - ರಾವಣರ ಯುದ್ಧ ಕಾಲದಲ್ಲಿ ಲಕ್ಷ್ಮಣನಿಗೆ ಬ್ರಹ್ಮಾಸ್ತ್ರ ಪ್ರಯೋಗವಾದಾಗ ಶ್ರೀರಾಮಚಂದ್ರ ಪ್ರಭು ತಕ್ಷಣವೇ ಸುಷೇಣ ವೈದ್ಯನನ್ನು ಕರೆತರುವಂತೆ ಆಂಜನೇಯನಿಗೆ ಅಪ್ಪಣೆ ಮಾಡುತ್ತಾನೆ. ಸಮಯಪ್ರಜ್ಞೆಯಲ್ಲಿ ಆಂಜನೇಯನಿಗೆ ಸಮಾನರಾದವರು ಬೇರೊಬ್ಬರಿಲ್ಲವೆಂಬುದನ್ನು ರಾಮಚಂದ್ರನು ಚೆನ್ನಾಗಿ ತಿಳಿದವನಾಗಿದ್ದ. ಆದುದರಿಂದಲೇ ಸಂಜೀವಿನಿ ಪರ್ವತವನ್ನು ತಂದಿರಿಸುವ ಭಾರವನ್ನೂ ಸಹ ಆತನು ಹನುಮಂತನಿಗೇ ಒಪ್ಪಿಸಿದ್ದು ಸಹಜವೆನಿಸುವುದು.

ಪವನಪುತ್ರನಾದ ಆಂಜನೇಯನಿಗೆ ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ, ದೇವದತ್ತ ಕೂರ್ಮ, ಕೃಕಲ, ಧನಂಜಯ - ಹೀಗೆ ಅನೇಕ ಸಂಬಂಧಗಳಿವೆ. ಯಾರು ವಾಯುತತ್ವದ ಮೇಲೆ ವಿಜಯ ಸಂಪಾದಿಸುವರೋ ಇಲ್ಲವೆ ಪ್ರಾಣವಾಯುವನ್ನು ತಮ್ಮ ಸ್ಥಿರತೆಯಲ್ಲಿಟ್ಟು ಕೊಂಡು ಸಮರ್ಥರೆಂದೆನಿಸಿಕೊಂಡಿ ದ್ದಾರೆಯೋ ಅಂಥವರನ್ನು ಯೋಗಿಗಳೆಂದೂ ಸಿದ್ಧಪುರುಷರೆಂದೂ ಗುರುತಿಸಲಾಗುತ್ತದೆ. ಈ ವಿಚಾರದಲ್ಲಿ ಆಂಜನೇಯನು ಸಿದ್ಧಿದಾಯಕ



ದೇವನೆಂದೇ ಕರೆಸಿಕೊಳ್ಳುತ್ತಾನೆ. ಆಂಜನಾಪುತ್ರನ ಅಷ್ಟಸಿದ್ಧಿಗಳು ಪ್ರಸಿದ್ಧವಾಗಿವೆ.

ಆಯುರ್ವೇದದಲ್ಲಿ ಆಚಾರ್ಯಪುರುಷ ರೆಂದೆನಿಸಿಕೊಳ್ಳುವ ಚರಕ, ವಾಗ್ಭಟ, ಶುಶ್ರುತ ಮೊದಲಾದ ಮುನಿವರ್ಯರು ಈ ಆಯುರ್ವೇದ ಶಾಸ್ತ್ರವನ್ನು ಮೂರು ತತ್ವಗಳಲ್ಲಿ ಹೇಳಿರುವರು. ಈ ಧ್ಯಾನ ಶ್ಲೋಕವು ಬಳಕೆಯಲ್ಲಿದೆ.

ಆಂಜನೇಯ ಮತಿ ಪಾಟಲಾನನಂ
ಕಾಂಚನಾದ್ರಿ ಕಮನೀಯ ವಿಗ್ರಹ ।
ಪಾರಿಜಾತ ತರುಮೂಲ ವಾಸಿನಂ
ಭಾವಯಾಮಿ ಪವಮಾನ ನಂದನಮ್ ॥

ಹನುಮಂತನಿಗೆ ಪಾರಿಜಾತ ವೃಕ್ಷವು ಬಹು ಪ್ರಿಯ. ಅದರಡಿಯಲ್ಲಿಯೇ ಆತನ ವಾಸ. ಇದೇ ರೀತಿಯಾಗಿ ಇನ್ನೊಂದು ವಿದ್ಯಾ ಪ್ರದಾನ ಮಂತ್ರದಲ್ಲಿ ಈತನು ಬಾಳೆಯ ತೋಟದಲ್ಲಿ ಕುಳಿತು ಒಂದು ಕೈ ಮೊಳಕಾಲಿನ ಮೇಲಿಟ್ಟು ಇನ್ನೊಂದು ಕೈಯಲ್ಲಿ ಬ್ರಹ್ಮಧ್ಯಾನ ನಿರತನೆಂದೂ ಹೇಳಲಾಗಿದೆ. ಹನುಮಂತನು ವೀರ ಬ್ರಹ್ಮಚಾರಿ. ನೈಷ್ಠಿಕ ಬ್ರಹ್ಮಚಾರಿ.

ಅಂಜಲೀಬದ್ಧನಾದ ಹನುಮಂತನ ವಿಗ್ರಹವನ್ನು ಮನೆಯಲ್ಲಿಟ್ಟು ಪೂಜೆ ಮಾಡಲು ಒಳ್ಳೆಯದೆಂದು ನಂಬುತ್ತಾರೆ. ದೇವಾಲಯ ಗಳಲ್ಲಿ ರಣವೀರಾಂಜನೇಯನ ವಿಗ್ರಹಗಳೇ ಹೆಚ್ಚಾಗಿ ಕಾಣಸಿಗುತ್ತವೆ. ಗದಾಧಾರಿ ಯಾಗಿಯೋ, ಪರ್ವತವನ್ನೆತ್ತಿಕೊಂಡೋ ಮರವನ್ನೆತ್ತಿ ದಾಪುಗಾಲು ಹಾಕಿದವನನ್ನೋ ನಾವು ಕಾಣಬಹುದಾಗಿದೆ. ಗದೆಯು ವೀರಾವೇಶದ ಮುದ್ರೆಯಾದರೆ, ಮರ ಹಿಡಿದಿರುವುದು ದೈತ್ಯರ ಸಂಹಾರಕ್ಕಾಗಿ ಎಂದೂ, ಇನ್ನು ಬೆಟ್ಟವನ್ನೆತ್ತಿ ಹಿಡಿದಲ್ಲಿ ಸಂಜೀವಿನಿ ಪರ್ವತವನ್ನು ಎತ್ತಿ ತಂದ ದ್ಯೋತಕವೆಂದೂ ನಂಬುತ್ತಾರೆ. ಕೆಲವು ಸಂದರ್ಭಗಳಲ್ಲಿ ರಾಮ ಲಕ್ಷ್ಮಣರನ್ನು ಹೆಗಲ ಮೇಲೇರಿಸಿಕೊಂಡಿರುವಂತೆ ಬಿಡಿಸಲಾದ ವಿಗ್ರಹಗಳೂ ನಮಗೆ ಕಾಣಸಿಗುತ್ತವೆ.

ಸಾಮಾನ್ಯವಾಗಿ ಹನುಮಂತನು ದ್ವಿಭುಜನಾಗಿಯೇ ಕಾಣಿಸಿಕೊಳ್ಳುತ್ತಾನೆ. ಆದರೆ ಕೆಲವು ಸಂದರ್ಭಗಳಲ್ಲಿ ಆತನು ಆರು ಕೈಗಳಿಂದ ಮತ್ತೆ ಕೆಲವು ಸಂದರ್ಭಗಳಲ್ಲಿ ಎಂಟು ಕೈಗಳಿಂದ ಕೂಡಿದ ಪಂಚಲೋಹದ ವಿಗ್ರಹಗಳೂ ನಮಗೆ ಕಾಣಸಿಗುತ್ತವೆ. ಹನುಮಂತನಿಗೆ ಪಂಚಮುಖಿ ವಿರುವ ಕಲ್ಪನೆಯೂ ಸಹ ಇದೆ. ಮಂತ್ರಾಲಯದ ಇನ್ನೊಂದು ದಂಡೆಯ ಮೇಲೆ ಪಂಚಮುಖದ ಆಂಜನೇಯನಿದ್ದು ಕಲಿಯುಗದ ಕಲ್ಪತರು ಎಂದೆನಿಸಿರುವನು.

ಶ್ರೀ ರಾಘವೇಂದ್ರ ಸ್ವಾಮಿಗಳು ಈ ದೇವನನ್ನು ಕುರಿತು ತಪಗೈದರೆಂದು ಪ್ರತೀತಿ ಇದೆ. ಪಂಚಮುಖಿಗಳೆಂದರೆ ಮುಂಭಾಗದಲ್ಲಿ ವಾನರ ಮುಖವಾದರೆ, ಬಲಗಡೆ ಸಿಂಹಮುಖ, ಎಡಭಾಗದಲ್ಲಿ ವರಾಹ ಮುಖ, ಮೇಲ್ಭಾಗದಲ್ಲಿ ಕುದುರೆಯ ಮುಖ (ಹಯಮುಖ), ಶಂಖ, ಚಕ್ರ, ಪಾಶ ಅಥವಾ ಖಟ್ವಾಂಗ, ಅಂಕುಶ, ಪರ್ವತ, ಗದೆ, ಮುಸಲ ಅಥವಾ ಮುಷ್ಟಿ - ಹೀಗೆ ನಾನಾವಿಧ ಆಯುಧಗಳನ್ನು ಹಿಡಿದ ಭಂಗಿಯಲ್ಲಿರುವ ವಿಗ್ರಹಗಳನ್ನು ಕಂಡಾಗ ಎಂಥಹವನಿಗೂ ಅಚ್ಚರಿಯೆನಿಸದಿರದು. ಕೆಲವು ಮಾಧ್ವ ಸಂಪ್ರದಾಯದ ಮಠಗಳಲ್ಲಿ ಇಂಥ ವಿಗ್ರಹಗಳಿರುವುದನ್ನು ಈ ಲೇಖಕನು ಕಂಡಿದ್ದಾನೆ. ಯೋಗಾಂಜನೇಯ ಚತುರ್ಭುಜ ಮೂರ್ತಿಯದಾಗಿದ್ದು, ಎಡಗೈ ಲಂಬಹಸ್ತ ಮುದ್ರೆ, ಬಲಗೈಯಲ್ಲಿ ಜಪಮಾಲೆ, ಮೂರನೆಯದರಲ್ಲಿ ಯೋಗದಂಡ, ನಾಲ್ಕನೆಯ ಕೈಯಲ್ಲಿ ಕಮಂಡಲ ಧರಿಸಿರುತ್ತಾನೆ.

ಮರ್ಕಟೇಶ ಮಹೋತ್ಸಾಹ
ಸರ್ವಶೋಕ ವಿನಾಶಕ ।
ಶತ್ರೂನ್ ಸಂಹರ ಮಾಂ ರಕ್ಷ
ಶ್ರಿಯಂದಾಪಯ ಮೇ ಪ್ರಭೋ ॥

ಈತನು ಅಂಜನಾಪುತ್ರನಾದುದರಿಂದ ಆಂಜನೇಯನೆಂದೂ, ರುದ್ರಾಂಶ ಸಂಭೂತನೆಂದೂ, ಸೂರ್ಯಪುತ್ರನೆಂದೂ, ವಾಯುಪುತ್ರನೆಂದೂ, ಮರುದ್ಗಣಗಳಿಗೆ ಸಮೀಪದವನೆಂದೂ, ವಿಭಿನ್ನ ನಾಮಗಳಿಂದ ಭಕ್ತರ ಮನವನ್ನಾಕರ್ಷಿಸುತ್ತ ಅವರವರ ಅಭೀಷ್ಟಗಳನ್ನು ಪೂರೈಸುತ್ತಾನೆಂಬ ನಂಬಿಕೆಯೂ ಇದೆ. ಈತನು ಶ್ರೀರಾಮ ಭಕ್ತನಾದುದರಿಂದ ಹರಿನಾಮಧಾರಕನೆಂದು ಭಾವಿಸುವ ಭಕ್ತರ ಸಂಖ್ಯೆಯು ಅಪಾರ. ಅನನ ಮುಖದಿಂದ ಸದಾ ಕಾಲವೂ ಶ್ರೀರಾಮ ಶ್ರೀರಾಮ ಎಂಬ ರಾಮ ಧ್ಯಾನವು ಹೊರಹೊಮ್ಮುವುದೆಂಬ ನಂಬಿಕೆಯು ಭಾರತೀಯರಲ್ಲಿದೆ. ಯೋಗಾಸನದಲ್ಲಿ ಬಿಡಿಸಲಾದ ವಿಗ್ರಹಗಳೂ ಇವೆ. ಇನ್ನು ದ್ವಿಭುಜ ಯೋಗಾಂಜನೇಯನ ವಿಗ್ರಹವನ್ನೂ ಸಹ ನಾವು ಕಾಣುತ್ತೇವೆ. ಪದ್ಮಾಸನದಲ್ಲಿ ಮಂಡಿತನಾಗಿ ಬಲಗೈಯಲ್ಲಿ ಚಿನ್ಮುದ್ರೆ, ಎಡಗೈಯಲ್ಲಿ ಪುಸ್ತಕ ಅಥವಾ ವೀಣಾಪಾಣಿಯಾಗಿ ನಿಂತಂತಿರುವ ಮೂರ್ತಿಗಳೂ ಇವೆ.

ಹನುಮಂತನ ವಾಹನವನ್ನು ವಿಷ್ಣು ದೇವಾಲಯಗಳಲ್ಲಿ ಬಳಸುತ್ತಾರೆ. ಗಂಟೆಯ ಮೇಲೆ ಸ್ಥಾನಕ ಮುದ್ರೆಯ ಹನುಮಂತನನ್ನೂ ಬಿಡಿಸುತ್ತಾರೆ. ❃

# ಆಂಜನೇಯ ವಿಲಾಸ

**- ಪ್ರೊ॥ ಸು. ಗುರುರಾಜ.**

ಹನುಮಂತ ಪರಮಭಕ್ತ, ಮಹಾವೀರ, ಸಂಗೀತ ನಾಟ್ಯಶಾಸ್ತ್ರಗಳನ್ನು ಅರಿತಿದ್ದ ಕೋವಿದ. ಜೊತೆಗೇ ವೇದಾಂತಿ, ದಾಸರಲ್ಲಿ ಅಗ್ರಗಣ್ಯ, ಭೃತ್ಯರಲ್ಲಿ ಉತ್ತಮ ಭೃತ್ಯ. ಭಾರತದಲ್ಲಿ ಇವನ ಗುಡಿ ಇಲ್ಲದ ಊರಿಲ್ಲ. ಇವನ ಭಕ್ತರಿಲ್ಲದ ಮನೆಯಿಲ್ಲ.

ಹನುಮನಿಲ್ಲದ ಹಳ್ಳಿಯಿಲ್ಲ ಎಂಬಂತೆ ಹನುಮಂತ ನಮ್ಮ ಜನಗಳನ್ನು ಕಾಲದಿಂದಲೂ ಕಾಪಾಡಿಕೊಂಡು ಬಂದಿರುವ ಸಂರಕ್ಷಣದೇವತೆ. ರಾಮ ಲಕ್ಷ್ಮಣರು ಹನುಮಂತನನ್ನು ಮೊಟ್ಟಮೊದಲಬಾರಿಗೆ ಕಂಡಾಗಲೇ ಪ್ರಭಾವಿತನಾದ ಶ್ರೀರಾಮಚಂದ್ರ ಲಕ್ಷ್ಮಣನಿಗೆ ಹನುಮಂತನನ್ನು ಕುರಿತು ಹೇಳುತ್ತಾನೆ - ''ಶುದ್ಧ ಸಂಸ್ಕಾರ ಹೊಂದಿದ ಕರ್ಮಸಂಪನ್ನನಾದ ಈತ ಸಕಲ ವೇದಗಳನ್ನೂ ಕರತಲಾಮಲಕ ಮಾಡಿಕೊಂಡಿದ್ದಾನೆ. ಈತ ತೇಜಸ್ವಿ, ಸಾಹಸಿ, ಸಾಧಕ, ಶೌರ್ಯ, ಧೈರ್ಯ, ದಕ್ಷತೆ, ಪರಾಕ್ರಮಗಳು ಇವನಲ್ಲಿ ಮನೆಮಾಡಿವೆ.'' ಇಂತಹ ಹನುಮಂತ ಮೂಲತಃ ಕರ್ನಾಟಕದವನು ಎಂಬ ಹೆಗ್ಗಳಿಕೆ ನಮ್ಮದು. ಹನುಮ ಶಕ್ತಿಯ ತವರು ಈ ನೆಲ. ಆದರೆ ಹನುಮಶಕ್ತಿಯ ಪ್ರಭಾವದ ಪ್ರವಾಹ ಶತಮಾನಗಳಾಚೆ, ಕರ್ನಾಟಕದಾಚೆ, ಭಾರತದಾಚೆ ವ್ಯಾಪಿಸಿ ಬೆಳೆದಿದೆ.

ಇಂತಹ ಕಟ್ಟಾಳು ಹನುಮಂತನ ಪೂಜೆ ಭಾರತಾದ್ಯಂತ ಜನಪ್ರಿಯವಾಗಿದೆ. ಕ್ರಿ.ಶ. ಹದಿನಾರನೆಯ ಶತಮಾನದಲ್ಲಿ ವ್ಯಾಸರಾಯರು ಸುಮಾರು 732 ಹನುಮನ ವಿಗ್ರಹಗಳನ್ನು ವಿವಿಧೆಡೆಗಳಲ್ಲಿ ಸ್ಥಾಪಿಸಿದರೆಂಬ ವಿಚಾರವನ್ನು ಗಮನಿಸಿದರೆ ಅವರ ಜನಪ್ರಿಯತೆಯ ಅರಿವಾಗುತ್ತದೆ. ಇಂತಹ ಜನಪರ ದೇವರಾದ ಮಾರುತಿ ಜನಪದ ದೈವವೂ ಹೌದು ಶಿಷ್ಟದೈವವೂ ಹೌದು.

ಕೆಲವರಿಗೆ ಮಾರುತಿ ಮನೆದೇವರಾದ್ದರಿಂದ ಅಂತಹವರು ಶನಿವಾರ ಒಪ್ಪೊತ್ತು ಉಂಡು ಹನುಮನಿಗೆ ನಡೆದುಕೊಳ್ಳುತ್ತಾರೆ. ವರ್ಷಕ್ಕೆ ಒಮ್ಮೆ ರಥೋತ್ಸವ ಮಾಡಿ ಹನುಮನನ್ನು ರಥದಲ್ಲಿ ಮೆರೆಸಿ ಪೂಜಿಸುತ್ತಾರೆ. ಮದುವೆಯಿಲ್ಲದವರು ಮಕ್ಕಳಿಲ್ಲದವರು ಮಾರುತಿಗೆ ಹರಕೆ ಹೊರುವ ಪದ್ಧತಿಯಿದೆ. ಗರಡಿಯಾಳುಗಳು ತಮ್ಮ ದೇಹದಾರ್ಢ್ಯಕ್ಕಾಗಿ ಮಾರುತಿಯ ಮೊರೆ ಹೋಗುವರು. ಹನುಮ, ಪವನ, ಸಂಜೀವ, ಮಾರುತಿ, ಪ್ರಾಣೇಶ - ಮೊದಲಾದ ಹೆಸರುಗಳನ್ನು ಮಕ್ಕಳಿಗೆ ಇಡುವ ಮೂಲಕ ಜನರು ತಮ್ಮ ಭೃತ್ಯಸ್ಯ ಭೃತ್ಯ ಭಕ್ತಿಯನ್ನು ವ್ಯಕ್ತಪಡಿಸುವರು.

ಆಂಜನೇಯನ ಉಲ್ಲೇಖ ವೈದಿಕ ಸಾಹಿತ್ಯದಲ್ಲಿಯೇ ದೊರೆಯುವುದು ಒಂದು ಮುಖ್ಯವಿಚಾರ. ಅದರಲ್ಲಿಯೂ ಬಳಿತ್ಥಾ ಸೂಕ್ತ ಮುಖ್ಯವಾಗಿ ಹನುಮಂತ ಪರವಾದದ್ದೇ ಎಂದು ಮಧ್ವಾಚಾರ್ಯರು ಪ್ರತಿಪಾದಿಸಿದ್ದಾರೆ. ಛಾಂದೋಗ್ಯ, ಬೃಹದಾರಣ್ಯಕ ಮೊದಲಾದ ಉಪನಿಷತ್‌ಗಳಲ್ಲಿ ಪ್ರಾಣದೇವರ ಪ್ರಸ್ತಾಪವಿದೆ.

ಇದು ಆಂಜನೇಯನ ಕಲ್ಪನೆಯ ಮೂಲಸ್ತರ. ಪುರಾಣಗಳಲ್ಲಿ ಅವನು ಆಂಜನೇಯನನ್ನು ರುದ್ರಾಂಶನೆಂದೂ ಶಿವ ಸಂಭೂತನೆಂದೂ ಹೇಳುವುದಿದೆ. ಶಿವ ಪುರಾಣದಲ್ಲಿ (ರುದ್ರ ಸಂಹಿತೆ) ಶಿವನು ತಾನು 'ಆದಿತ್ಯಾನಾಂ ವಾಸುದೇವೋ ಹನುಮಾನ್ ವಾನರೇಷು ಚ' ಎಂದು ಹೇಳಿದ್ದಾನೆ. ಆನಂದರಾಮಾಯಣವೂ ಸಹ ''ರುದ್ರಾವತಾರಃ ಸಂಜಜ್ಞಾ ವಾಯುಪುತ್ರಃ ಪ್ರತಾಪವಾನ್'' ಎನ್ನುತ್ತದೆ. ಏಕಾದಶ ರುದ್ರರ ನಡುವೆ ಕಡೆಯವನಾದ ಒಬ್ಬನು ಶತ್ರು ಸಂಹಾರಕನಾದ ಹನುಮಂತನೆಂದು ಮಂತ್ರರಾಮಾಯಣದ ನೀಲಕಂಠ ಭಾಷ್ಯ ಹೇಳುತ್ತದೆ.

ಹನುಮಂತನ ಕಲ್ಪನೆಯಲ್ಲಿ ಹಾಸು ಹೊಕ್ಕಾಗಿರುವ ವೈದಿಕ ವಿವರಗಳು ಹಲವಿವೆ. ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಹನುಮಂತನ ಸ್ವಾರಸ್ಯ ಇಮ್ಮಡಿಸುತ್ತದೆ. ಕಥೆಯ ಪ್ರಕಾರ ಕೇಸರಿಯೆಂಬ ವಾನರ ರಾಜನ ಪತ್ನಿಯಾದ ಅಂಜನಾದೇವಿಯೆಂಬ ಅಪ್ಸರೆಯಲ್ಲಿ ವಾಯುವಿನ ಅಂಶದಿಂದ ಹುಟ್ಟಿದವನೆಂದೂ, ಸೂರ್ಯನ ಬಳಿ ಜ್ಞಾನವನ್ನು ಪಡೆದುಕೊಂಡನೆಂದೂ ಹೇಳಲಾಗಿದೆ. ಅಂಜನಾದೇವಿಯು ಮೊದಲು ಪುಂಜಿಕಸ್ಥಲೆಯೆಂಬ ಅಪ್ಸರೆಯಾಗಿದ್ದು ಶಾಪದಿಂದಾಗಿ ಭೂಮಿಯ ಮೇಲೆ ಕಂಡು ಬಂದವಳು. ಈ ಪುಂಜಿಕ ಸ್ಥಲೆಯ ಉಲ್ಲೇಖ ಶತಪಥ ಬ್ರಾಹ್ಮಣದಲ್ಲಿ ಬರುತ್ತದೆ. ಇಲ್ಲಿ ಪುಂಜಿಕ ಸ್ಥಲೆಯೆಂದರೆ ಎಡೆತಡೆಯಿಲ್ಲದ ದಿಕ್ಕುಗಳು ಅಥವಾ ಅಗ್ನಿಯ ಸೇನೆ. ಹೀಗೆ ಆಂಜನೇಯನಿಗೂ ವಾಯು ಅಗ್ನಿಗಳಿಗೂ ಇರುವ ಸಂಬಂಧಗಳನ್ನು ಕಥೆಗಳಲ್ಲಿ ಸಾಂಕೇತಿಕವಾಗಿ ಕಾಣಿಸಲಾಗಿದೆ.

ವಾಯು ಅಗ್ನಿ - ಇವೆರಡೂ ವೈದಿಕ ದೇವತೆಗಳೂ ರುದ್ರನೊಂದಿಗೆ ಕೂಡಿರುವುದಾಗಿ ಹನುಮಂತನು ಮಗುವಾಗಿದ್ದಾಗ ಸೂರ್ಯನನ್ನು ಹಿಡಿದು ಬಾಯೊಳಗೆ ಅಡಗಿಸಿಕೊಂಡ ಜಗತ್ತಿಗೆಲ್ಲ ಕತ್ತಲೆಯುಂಟಾಯಿತು. ಇಂದ್ರನಿಗೆ ಕೋಪ ಬಂದಿತು. ಆತನು ರೋಷದಿಂದ ತನ್ನ ವಜ್ರಾಯುಧವನ್ನೆತ್ತಿ ಮಗುವಿನ ಮುಖಕ್ಕೆ ಹೊಡೆದ. ದವಡೆ ಊದಿಕೊಂಡು ಸೂರ್ಯನು ಹೊರಬಂದ. ಹನುಮಂತ ಎಂಬ ಮಾತಿಗೆ ದೊಡ್ಡದಾದ ಹನು - ದವಡೆಯವನು ಎಂಬ ಅರ್ಥವಿದೆ. ಆದರೆ ಆಚಾರ್ಯ ಮಧ್ವರು ಇದು ತೋರಿಕೆಯ ಅರ್ಥವೆಂದೂ, ನಿಜವಾದ ಅರ್ಥ ವೇದಮಂತ್ರಗಳಲ್ಲಿ ಕಾಣಬರುವುದೆಂದೂ ಹೇಳುತ್ತಾರೆ. ಅವರು ಹೇಳುವಂತೆ ಹನುವೆಂದರೆ ಜ್ಞಾನ. ಹನುಮಂತ - ಬುದ್ಧಿಮತಾಂ ವರಿಷ್ಠ - ಎಂದೇ ಪ್ರಸಿದ್ಧ. ಅವನು ಪ್ರಾಜ್ಞ. ಎಂದೇ ರಾಮಾಯಣದ ಒಕ್ಕಣೆ.

ಹನುಮ ತತ್ವವನ್ನು ಅರಿತುಕೊಳ್ಳಲು ನೂರೈವತ್ತು ಪಟಲಗಳಿರುವ ಪರಾಶರ ಸಂಹಿತೆ

ನೆರವಿಗೆ ಬರುತ್ತದೆ. ಇದು ಪರಾಶರರಿಗೂ ವೈನತೇಯರೆಂಬ ಋಷಿಗೂ ನಡೆದ ಸಂವಾದ ರೂಪದಲ್ಲಿದೆ. ಇದರಲ್ಲಿ ಹನುಮಂತನ ಜನನ ವೈಶಾಖ ಮಾಸದ ಕೃಷ್ಣ ಪಕ್ಷದ ದಶಮಿಯಂದು, ಶನಿವಾರ ಪೂರ್ವಾಭಾದ್ರ ನಕ್ಷತ್ರ, ಕರ್ಕಾಟಕ ಲಗ್ನ, ವೈಧೃತಿಯೋಗ ಎಂಬ ಒಕ್ಕಣೆಯಿದೆ. ಇದರ ಅರವತ್ತನೆಯ ಪಟಲದಲ್ಲಿ ಹನುಮಂತನ ಒಂಭತ್ತು ಅವತಾರ ವೈವಿಧ್ಯಗಳನ್ನು ಹೇಳಿದೆ. ಪ್ರಸನ್ನಾಂಜನೇಯ, ವೀರಾಂಜನೇಯ, ವಿಂಶತಿ ಭುಜಾಂಜನೇಯ (ಇಪ್ಪತ್ತು ಕೈಗಳ ಮಾರುತಿ) ಪಂಚಮುಖಿ ಆಂಜನೇಯ, ಅಷ್ಟಾದಶ ಭುಜ (ಹದಿನೆಂಟು ಕೈಗಳು) ಆಂಜನೇಯ, ಸುವರ್ಚಲಾಪತಿ (ಸುವರ್ಚಲೆ ಸೂರ್ಯನ ಮಗಳು. ಇಲ್ಲಿ ಆಂಜನೇಯ ಬ್ರಹ್ಮಚಾರಿಯಲ್ಲ ಸಂಸಾರಿ. ಮದುವೆಯಾದದ್ದು ಜೇಷ್ಠಮಾಸದ ಶುಕ್ಲ ದಶಮಿಯಂದು.) ಚತುರ್ಭುಜ (ನಾಲ್ಕು ಕೈಗಳು) ಉಗ್ರಾಂಜನೇಯ ಮತ್ತು ಭಕ್ತಾಂಜನೇಯ. ಕಡೆಯ ಅವತಾರವೇ ನಮಗೆ ಪರಿಚಿತವಾದ ಪೂಜೆಯನ್ನು ಮಾಡಲು ಆಶಿಸುವಂತಹ ಭಕ್ತಾಂಜನೇಯ. ಈ ಗ್ರಂಥದಲ್ಲಿ ಆಂಜನೇಯನ ಸಾವಿರ ಹೆಸರೂಗಳೂ ಇವೆ, ವಿವರವೂ ಇದೆ. ಇವುಗಳಲ್ಲಿ ಒಂದು ಭವಿಷ್ಯಚ್ಚತುರಾನನ - (ಭವಿಷ್ಯದಲ್ಲಿ ಬ್ರಹ್ಮನಾಗುವ ಉಲ್ಲೇಖ.)

ರಾಮಾಯಣದಲ್ಲಿಯಂತೂ ಸ್ವಾಮಿನಿಷ್ಠೆ ಕಾರ್ಯತತ್ಪರತೆ ಬುದ್ಧಿ ಕುಶಲತೆ ಪರಾಕ್ರಮಗಳ ಆಗರವಾಗಿ ಕಾಣುತ್ತಾನೆ - ಮಾರುತಿ. ಶೌರ್ಯ, ದಕ್ಷತೆ, ಧೈರ್ಯಗಳ ಪ್ರತಿಮೂರ್ತಿಯಿವನು. ಶ್ರೀರಾಮನ ಅವಿಚ್ಛಿನ್ನ ಭಕ್ತ. ರಾಮನ ಭಂಟನೆಂದೇ ಖ್ಯಾತನಾದವನು. ಏಟಿಗೆ ಎಂಟು ಸಾವಿರಮಂದಿ ರಾಕ್ಷಸರನ್ನು ಸದೆಬಡಿಯಬಲ್ಲ ಸಮರ್ಥ. ದುಷ್ಟ ಶಿಕ್ಷೆ ಶಿಷ್ಟ ರಕ್ಷೆಗಳಿಗಾಗಿ ರಾಮನೊಡನೆ ಕೆಲಸಮಾಡಿದ ವ್ಯಕ್ತಿ. ಮನೋನಿಗ್ರಹ, ಆತ್ಮಸಂಯಮ, ಆತ್ಮ ವಿಶ್ವಾಸಗಳಿಂದ ಕೆಲಸಮಾಡಿ ಹಿಡಿದ ಕೆಲಸ ಸಾಧಿಸಿ, ಆದರ್ಶಪ್ರಾಯನೆನಿಸಿದ. ಇಂತಹ ದಾಸ್ಯ ಭಕ್ತಿಯ ಮೂರ್ತಸ್ವರೂಪನೆನಿಸಿದ ಮಾರುತಿ ಕರ್ನಾಟಕ ಹರಿದಾಸರಿಗೆ ಸಾಕ್ಷಾತ್ ಗುರುಸ್ವರೂಪಿ. ಅದರಲ್ಲಿಯೂ ಮಾಧ್ವ ಸಂಪ್ರದಾಯಸ್ಥರಿಗೆ ತಮ್ಮ ಗುರುಗಳಾದ ಮಧ್ವಾಚಾರ್ಯರು ಹನುಮಂತನ ಅವತಾರ ವೆಂದೇ ನಂಬಿಕೆ. 'ತ್ರೇತೆಯಲ್ಲಿ ಹನುಮಂತ ದ್ವಾಪರದಿ ಭೀಮಣ್ಣ ಕಲಿಯುಗದಿ ಗುರುಮಧ್ವ'ರಾಗಿ ಅವತರಿಸಿದರೆಂದು ಪ್ರತೀತಿ.

ಹರಿದಾಸ ಸಾಹಿತ್ಯ ಮೂಲತಃ ಈ ಮಧ್ವ ಮತ ತತ್ವಗಳ ಮೇಲೆ ಆಧಾರಿತವಾದದ್ದು. ಹರಿಸರ್ವೋತ್ತಮ ವಾಯು ಜೀವೋತ್ತಮ ತತ್ವ ಮಧ್ವಮತದ ಪ್ರಮುಖ ತತ್ವಗಳಲ್ಲೊಂದು. ವಿಷ್ಣುಭಕ್ತಿಯ ಆ ಕಥೆಗಳಲ್ಲಿ ಒಂದಾದ ರಾಮಾಯಣದ ಕಥೆಯನ್ನು ಹರಿದಾಸರು ತಮ್ಮ ಕೃತಿಗಳಲ್ಲಿ ಧಾರಾಳವಾಗಿ ಹಾಗೂ ವಿಶೇಷವಾಗಿ ಬಳಸಿಕೊಂಡಿದ್ದಾರೆ. ದಾಸರ ಪ್ರಕಾರ ಹನುಮನ ಮತವೇ ಹರಿಯಾ ಮತವು. ಭಕ್ತರ ಅಹವಾಲನ್ನು ಶ್ರೀಹರಿಗೆ ಮುಟ್ಟಿಸುವ ಬಂಟ ಹನುಮಂತ. ಶ್ರೀರಾಮ ಜಾನಕಿಯರ ನಡುವೆ ಸಮರ್ಥವಾಗಿ ದೂತಕಾರ್ಯ ನಿರ್ವಹಿಸಿದವನು. ಹನುಮಂತ ಪುರಂದರ ವಿಠಲನದಾಸ. ಆದರೂ ಹರಿಯ ವಾಸ ಹನುಮಂತನಲ್ಲಿಯೇ. ಆದ್ದರಿಂದಲೇ ಮಾಧ್ವ ಸಂಪ್ರದಾಯಸ್ಥರು ತಮ್ಮ ಎಲ್ಲ ಕೋರಿಕೆಗಳನ್ನು ''ಭಾರತೀರಮಣ ಮುಖ್ಯ ಪ್ರಾಣಾಂತರ್ಗತನಾದ'' ಶ್ರೀಹರಿಗೆ ಸಲ್ಲಿಸುವುದು.

ದಾಸರ ಪ್ರಕಾರ ಹನುಮಂತ ಮುಂದೆ ಬ್ರಹ್ಮಪಟ್ಟಕ್ಕೆ ಏರುವ ಮಹಾತ್ಮ. ಆದರೂ ವಾನರ ರೂಪದಿಂದ ಶ್ರೀಹರಿಯ ದುಷ್ಟ ದಮನಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡ. ಹಾಗೆ ಅವನು ಮೆರೆದ ಸಾಹಸ ಹಾಗೂ ಸ್ವಾಮಿನಿಷ್ಠೆಗಳು ರಾಮಾಯಣದಲ್ಲಿ ಮಡುಗಟ್ಟಿ ನಿಂತಿರಲು ಹರಿದಾಸರು ತಮ್ಮ ಕೃತಿಗಳಲ್ಲಿ ರಾಮಾಯಣದ ಸುಂದರಕಾಂಡದ ಕಥೆಯನ್ನು ಮತ್ತೆ ಮತ್ತೆ ಪ್ರಸ್ತಾಪಿಸಿ ಹನುಮನ ಅಪಾರ ಧೈರ್ಯಸಾಮರ್ಥ್ಯಗಳನ್ನು ಹೊಗಳಿದ್ದಾರೆ. ಎಲ್ಲ ಹರಿದಾಸರಿಗೂ ಈ ಕಥಾಭಾಗ ಅಚ್ಚುಮೆಚ್ಚು. ಸ್ವಾಮಿಕಾರ್ಯದಲ್ಲಿ ಯಶಸ್ವಿಯಾದ ಹನುಮಂತನಿಗೆ ಶ್ರೀಪಾದರಾಯರು 'ಜಯ ಜಯ ಜಗತ್ರಾಣ ಜಗದೊಳಗೆ ಸುತ್ರಾಣ' ಎಂದು ಜಯಕಾರ ಮಾಡುತ್ತಾರೆ. ಇಂತಹ ಅತುಲ ಪರಾಕ್ರಮಿ ಮಾರುತಿಗೆ ಸರಿಸಾಟಿಯಾಗಿ ನಿಲ್ಲಬಲ್ಲವರು ಯಾರು? 'ಈ ಮಹಿಯೊಳು ನಿನಗ್ಯಾರೈ ಸರಿಸಾಟಿ' ಎಂದು ಪ್ರಶ್ನಿಸುವ ವಾದಿರಾಜರು 'ಈತನೇ ಲೋಕಗುರು ವೇದವಿಖ್ಯಾತ ಇಂದೀವರಾಕ್ಷಿಗೆ ಮುದ್ರಿಕೆಯನಿತ್ತು ಬಂದು ರಾಮರ ಪಾದಕ್ಕೆರಗಿ ನಿಂತಾತ' ಎಂದು ಆಸ್ತಿಕ ಸಮೂಹಕ್ಕೆ ಹನುಮನನ್ನು ಪರಿಚಯಿಸುವರು.

ಮಾರುತಿಯ ಸ್ವಾಮಿನಿಷ್ಠೆಯನ್ನು ಮತ್ತೆ ಮತ್ತೆ ಮೆಲುಕು ಹಾಕುವ ಪುರಂದರ ದಾಸರು ಅವನನ್ನು 'ಕೂಸು' ಎಂದು ರೂಪಕಮಾಡಿ 'ಕೂಸನು ಕಂಡಿರಾ ಮುಖ್ಯ ಪ್ರಾಣನ ಕಂಡಿರಾ' ಎಂದು ಆ ಮಗುವನ್ನು ಹುಡುಕುವ ನೆಪದಲ್ಲಿ ಅವನ ಸಾಹಸ ಕಾರ್ಯಗಳನ್ನು ಪಟ್ಟಿ ಮಾಡಿ ಹೊಗಳಿದ್ದಾರೆ.

ಹಂಪೆಯ ಯಂತ್ರೋದ್ಧಾರ ಹನುಮನನ್ನು ಕಂಡು ಸೋಜಿಗ ಪಟ್ಟಿದ್ದಾರೆ ಗೋಪಾಲದಾಸರು. 'ಇದು ಏನೋ ಚಿಂತೆ ಯಂತ್ರೋದ್ಧಾರಕ ಹನುಮ' ಎಂದು ಅವನ ದಿವ್ಯ ಮೌನವನ್ನು ಪ್ರಶ್ನಿಸಿದ್ದಾರೆ. 'ಸೀತೆಯ ಚೂಡಾಮಣಿಯನ್ನು ರಾಮನಿಗೆ ತಂದಿತ್ತ, ಕಡಲಬಂಧಿಸಲು ಗಿರಿಗಳ ತಂದಿತ್ತ ಮಾರುತಿಯ ಹಸ್ತ' ವಿಜಯದಾಸರಿಗೆ ಬಲುಪ್ರಿಯ.

ಹನುಮನ ಸಾಹಸ ಪುರಂದರದಾಸರಿಗೆ ಬೆರಗನ್ನುಂಟುಮಾಡಿದೆ -

ರಾಮನು ರಾವಣನನ್ನು ಕೊಂದನಾದರೂ ಅವನನ್ನು ಪತ್ತೆಹಚ್ಚಿ ಕೊಲ್ಲಿಸಿದ್ದು ಹನುಮಂತ. ಆದರೂ ಶ್ರೀಹರಿ ಅವನ ಕೌಪೀನ ಬಿಡಿಸಲಿಲ್ಲ, ಅಷ್ಟೈಶ್ವರ್ಯವನ್ನೂ ಪ್ರಸಾದಿಸಲಿಲ್ಲ. ಹನುಮಂತನು ಅಂತಹದ್ದೇನನ್ನೂ ಬಯಸಲೂ ಇಲ್ಲ. ಅಂತಹ ಮಹಾತ್ಮನೇ ಕರ್ಮಬಂಧಿಯಾದಮೇಲೆ ಹುಲು ಮಾನವರ ಪಾಡೇನು ಎಂದು ಕರ್ಮ ತತ್ವ ಪ್ರತಿಪಾದನೆ ಮಾಡಿದ್ದಾರೆ ಪುರಂದರದಾಸರು.

ವಾದಿರಾಜರ ಪ್ರಕಾರ ಹನುಮಂತ ಸಂಗೀತ ಕಲಾನಿಪುಣ. ''ರಾಗತಾಳ ಮೇಳದಲ್ಲಿ ಜಾಣ'' ---- ಪ್ರವೀಣನಾದ ಹನುಮನನ್ನು ನೆನೆದರೆ ಸಾಕು 'ಹಾರಿಹೋಹುದು ಪಾಪ' ಎನ್ನುತ್ತಾರೆ.

ಜಗನ್ನಾಥ ದಾಸರು 'ತಿಪ್ಪಣಾದಿ ಮಾಯಿಗಳ ಗೆದ್ದ ಜಗನ್ನಾಥ ವಿಠಲನ ದೂತ' ಹನುಮಂತನಿಗೆ ನಮಸ್ಕರಿಸಿದ್ದಾರೆ. ಅಂತೆಯೇ 'ಮೂರು ಅವತಾರರೂಪಗೆ, ಸಂಜೀವನಾದ್ರಿಯ, ತಂದವಗೆ, ಮೂರೇಳು ಮತಗಳ ಮುರಿದವಗೆ ಮಂಗಳ'ವೆಂದು ಹಾಡಿ ಹನುಮಸ್ತುತಿ ನಡೆಸಿದ್ದಾರೆ.

# ನೈಮಿಷಾರಣ್ಯ

- ಪ್ರೊ. ಸಿ. ಗೋವಿಂದಾಚಾರ್.

ಭಗವಂತನು ಪರ, ವ್ಯೂಹ, ವಿಭವ, ಹಾರ್ದ ಮತ್ತು ಅರ್ಚಾ ಎಂಬ ಐದು ರೂಪಗಳಲ್ಲಿ ಅಥವ ವ್ಯೂಹಪಂಚಕಗಳಲ್ಲಿರುವನೆಂದು ಭಗವ ಚ್ಛಾಸ್ತ್ರಗಳು ತಿಳಿಸುವುವು. ಇವು ಅವನ ಲೀಲಾ ವಿಭೂತಿಯ ಒಂದಂಶವಾಗಿದೆ. ಇಂಥಾದ್ದೇ ನಿರ್ಧಿಷ್ಟವಾದ ರೂಪ ನಿಯಮ ಇಲ್ಲವಾದರೂ ಭಕ್ತರ ಅಭೀಷ್ಟಕ್ಕನುಗುಣವಾಗಿ ಅವನು ತಕ್ಕ ರೂಪದಲ್ಲಿ ಸಂಭವಿಸುವನು (ಜಿತಂತಾಸ್ತೋತ್ರ)

ನತೇ ರೂಪಂ ನ ಚಕಾರ
ನಾಯುಧಾನಿ ನ ಚಾಸ್ಪದಂ
ತಥಾಪಿ ಪುರುಷಾಕಾರಃ
ಭಕ್ತಾನಾಂ ತ್ವಂ ಪ್ರಕಾಶಸೇ

ಪರವ್ಯೂಹಾದಿಗಳು ಎಟುಕದ ರೂಪಗಳು . ಅರ್ಚಯೇತ್ ಪ್ರಣಯೇತ್ ಪ್ರದಕ್ಷಿಣ ಕುರ್ಯಾತ್ - ಎಂಬಂತೆ ಇಂದು ಅರ್ಚಾವತಾರವೇ ಬಹು ಸುಲಭವಾದ್ದು. ಇದಕ್ಕೆ ಮೊದಲು ಅಂದರೆ ಸುಮಾರು 3000 ವರ್ಷಗಳಿಗೂ ಹಿಂದೆಯೇ ಆರ್ಯರು ಮೇಘ, ಸೂರ್ಯ, ಮಳೆ, ಸಮುದ್ರ, ಆಕಾಶ, ಅರಣ್ಯ ಮುಂತಾದ ಪ್ರಕೃತಿ ವ್ಯಾಪಾರಕ್ಕೆ ಸಂಬಂಧಿಸಿದ ರೂಪದಲ್ಲಿ ದೇವ ಪೂಜೆಯನ್ನು ಮಾಡುತ್ತಿದ್ದರು. ಯಜ್ಞಗಳಲ್ಲಿ ಇವುಗಳನ್ನು ಆವಾಹನೆ ಮಾಡುತ್ತಿದ್ದರು. ನಿರ್ಧಿಷ್ಟವಾದ ಮೂರ್ತರೂಪ ಕಾಣಸಿಗದು. ಅನಂತರ ಅರಣ್ಯಗಳಲ್ಲಿ ವೃಕ್ಷ ಪೂಜೆ ಕಾಣಿಸಿಕೊಂಡಿತು. ಹಾವಿನಂತೆ ಕಾಣುವ ಮರ, ಕೊಂಬೆಗಳು ನಾಗ ಪೂಜೆಯೂ ಕಂಡು ಬಂದಿತು. ನದಿ ಸರಸ್ಸು ಅರಣ್ಯ ಮೊದಲಾದ ಸ್ಥಾವರಗಳಲ್ಲಿ ಭಗವಂತನ ಸಾನ್ನಿಧ್ಯವು ಗುರುತಿಸಲ್ಪಟ್ಟು ಎಂದೆಂದಿಗೂ ಇವು ಭಕ್ತರಿಗೆ ಲಭಿಸುವ ದಿವ್ಯತಾಣಗಳಾದುವು.

ಅದ್ಯಾಪಿ ಹಂತ ಸುಲಭಾಃ
ಕೃತೀನಾಂ ಜನಾನಾಂ
ಏತೇ ಭಗವಚ್ಚರಣ
ಚಾರು ಜುಷಃ ಪ್ರದೇಶಾಃ
- ಕೂರೇಶರ ಅತಿಮಾನುಷಸ್ತವ - 49

ಅರಣ್ಯದ ಪ್ರತಿಯೊಂದು ಗಿಡಮರವೂ ಭಗವಂತನಿಗೆ ತುಂಬಾ ಅಭಿಮತವಾದದ್ದು ಎಂಬ ವಿಷಯ ರಾಮಾಯಣದ ಕಾಕುತ್ಸ್ಥ ಪ್ರಸಂಗದಿಂದ ಸ್ಪಷ್ಟವಾಗಿದೆ. ಶ್ರೀರಾಮನು (ಕಾಕುತ್ಸ್ಥ) ತೃಣ ವೃಕ್ಷಾದಿಗಳನ್ನೂ ಬಿಡದೆ ಅವಕ್ಕೆ ಸದ್ಗತಿಯನ್ನು ಕಾಣಿಸಿದ. ತ್ವತ್ಸನ್ನಿಧಿ ಪ್ರಭಾವಶೈತ್ಯ ಜುಷೋ ಯಥಾಹಿ ವೃಕ್ಷಾಶ್ಚ ಶಾಂತಿಮಲಭಂತ - ಅ.ಮಾ.ಸ್ತ-30 ಈ ಹಿನ್ನೆಲೆಯಲ್ಲಿದೆ ನೈಮಿಷಾರಣ್ಯ ದಿವ್ಯಕ್ಷೇತ್ರ. ಭಗವಂತನು ಕ್ಷಿರಾರ್ಣವವನ್ನು ನಿರ್ಗಮಿಸಿ ಅರಣ್ಯರೂಪದಲ್ಲಿ ಕಾಣಿಸಿಕೊಂಡು ದೇವರಾಜ ಎಂಬ ದಿವ್ಯನಾಮದಿಂದ ಇಲ್ಲಿ ವ್ಯವಹರಿಸಲ್ಪಟ್ಟಿದ್ದಾನೆ.

1. ಶ್ರೀಮನ್ನೈಮಿಷಕಾನನೇತು ಭಗವನ್ ದೇವರಾಜೋ ಹರಿಃ -ಸ್ಥಳಪುರಾಣ.

2. ದೇವ ದೇವ ದೇವರಾಜ ಎಂದು ಸ್ಕಂದ ಪುರಾಣದ ಪೂರ್ವೋತ್ತರ ತೀರ್ಥ ಮಹಾತ್ಮ್ಯೆಯ 109 ನೆ ಅಧ್ಯಾಯದಲ್ಲಿದೆ.

3. ವಾನವರ್ಕು ಅರಶನೇ - ಪೆರಿಯತಿರುಮೊಳಿ 1-6-2.

4. ಪರಮನೇ ಪಾರ್ಕಡಲ್ ಕಿಡಂದಾಯ್ ನೈಮಿಷಾರಣಿಯತ್ತುಳ್

ಈ ದಿವ್ಯ ಕ್ಷೇತ್ರವು ಉತ್ತರಪ್ರದೇಶದ ಸೀತಾಪುರ ಜಿಲ್ಲೆಯ ಗೋಮತಿ ನದಿ ತೀರದಲ್ಲಿದೆ. ಮಹಾನ್ ಗೋಮತ್ಯಾ ನೈಮಿಷವನೇ (ರಾಮಾ. ಉ. ಕಾಂ. 91-15) ಈ ದಿವ್ಯನಾಮವನ್ನು ಬಿಡಿಸಿದರೆ ನೇಮಿ + ಷ + ಅರಣ್ಯ = ಚಕ್ರದ ಸುತ್ತು + ಸ್ಥಳ + ಕಾಡು /ವನ ಎಂದಾಗುವುದು. ಸತ್ಯಯುಗದ ಆರಂಭದಲ್ಲಿ ಬ್ರಹ್ಮನು ಸೃಷ್ಟಿಕಾರ್ಯವನ್ನು ಮುಗಿಸಿ ಧ್ಯಾನಾಸಕ್ತನಾಗಲು ಸಿದ್ಧನಾಗುತ್ತಿದ್ದಾಗ ಋಷಿಗಳು 'ಬ್ರಹ್ಮನ್ ಈ ಪೃಥ್ವಿಯಲ್ಲಿ ನಾವು ತಪಸ್ಸು ಯಜ್ಞ ಯಾಗಾದಿಗಳನ್ನು ಮಾಡಲು ಅತ್ಯುತ್ತಮ ಹಾಗೂ ಪವಿತ್ರವಾದ ಸ್ಥಳ ಯಾವುದು' ಎಂದು ಪ್ರಶ್ನಿಸಿದಾಗ ಬ್ರಹ್ಮನು ಸ್ವಸಂಕಲ್ಪದಿಂದ ಚಕ್ರವನ್ನು ನಿರ್ಮಿಸಿ 'ಯಾವ ಸ್ಥಳದಲ್ಲಿ ಈ ಚಕ್ರದ ಸುತ್ತು ತಾನಾಗಿಯೇ ಕಳಚಿ ಬೀಳುವುದೋ ಅದೇ ಶ್ರೇಷ್ಠವಾದುದು' ಎಂದು ಉತ್ತರಿಸುವನು. ಈ ಜಾಗವೇ ಚಕ್ರತೀರ್ಥ ಎಂದೆನಿಸಿಕೊಂಡಿದೆ. ದರ್ಭೆಯ ರಾಶಿ ಗುಂಡಾಗಿ ಸುತ್ತಿಕೊಂಡು ಚೆಂಡಿನಂತೆ ಇಲ್ಲಿಬಿದ್ದು ಮಹರ್ಷಿಗಳಿಗೆ ತಪಸ್ಸಿಗೆ ಅದು ಯೋಗ್ಯವಾದ ಸ್ಥಳವಾಯಿತು. ಹಾಗೂ ಸ್ವಾಯಂಭು ಮನುವು ಅವನ ಧರ್ಮಪತ್ನಿ ಸತ್ಯರೂಪಳೂ ಹಾಗೂ ವ್ಯಾಸಾದಿ ಸಪ್ತರ್ಷಿಗಳು ಇನ್ನೂ ಸಹಸ್ರಾರು ಮುನಿಗಳು ಯಜ್ಞಯಾಗ ತಪಸ್ಸು ಮಾಡಿದ ಸ್ಥಳವೇ ನೈಮಿಷಾರಣ್ಯ ಎಂದು ಕಥೆಯೂ ಇದೆ. 36 ಮಹರ್ಷಿಗಳ ತಪೋ ಭೂಮಿ ಇದು ಎಂದು ರಾಮಾಯಣದಲ್ಲಿದೆ.

ಸ್ಕಂದಪುರಾಣದ 110 ನೇ ಅಧ್ಯಾಯ ಪೂರ್ವೋತ್ತರತೀರ್ಥಗಳ ಮಹಾತ್ಮ್ಯೆಯಲ್ಲಿ ಶಿವ - ಪಾರ್ವತಿಯರ ಸಂಭಾಷಣೆಯ ರೂಪದಲ್ಲಿ ಕ್ಷೇತ್ರದ ವಿಚಾರವಿದೆ.

ಶಿವ : ದೇವಿ ಮಾನವರು ಭೂಲೋಕದಲ್ಲಿ ಸಕಲ ತೀರ್ಥಗಳಲ್ಲಿ ಸ್ನಾನಮಾಡಲು ಶಕ್ತರಲ್ಲ.

ಪಾರ್ವತಿ : ಹಾಗಾದರೆ ಮಾನವರು ಯಾವ ತೀರ್ಥದಲ್ಲಿ ಸ್ನಾನಮಾಡಬೇಕು?

ಶಿವ : ದೇವಿ ನೈಮಿಷ, ಪುಷ್ಕರ, ಪ್ರಭಾಸಗಳಲ್ಲಿ ಸ್ನಾನಮಾಡಿದರೆ ಬೇರೆ ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದಷ್ಟು ಫಲ ಲಭಿಸುವುದು.

ಅದೇ ಪುರಾಣದ ಅಷ್ಟಷಷ್ಟಿ ತೀರ್ಥವರ್ಣನೆಯಲ್ಲೂ (108 ನೇ ಅಧ್ಯಾಯ) ವಿಚಾರಗಳಿವೆ. ದೇವಿ ನೈಮಿಷ ಪುಷ್ಕರ, ಪ್ರಯಾಗ - ಇವು ಮೂರೂ 68 ತೀರ್ಥಗಳ ಪೈಕಿ ಪ್ರಥಮಶ್ರೇಣಿಯಲ್ಲಿದೆ. ದೇವೇಂದ್ರನು ಹಿಂದೆಯೇ ಇವುಗಳ ಬಗ್ಗೆ ಕೇಳಿದ್ದ. ನಾನು ಉತ್ತರಿಸಿರಲಿಲ್ಲ. ಈಗ ನಿನಗೆ ಮಹಿಮೆಯನ್ನೂ ರಹಸ್ಯವನ್ನೂ ಹೇಳುವೆನು ಕೇಳು. ತಾಯಿತಂದೆ ಸತ್ಸಂಗ ದೇವರ್ಷಿಗಳ ಮತ್ತು ಮುನಿಗಳ ಸ್ಥಾನ, ಕಥೆ, ನದಿ, ಅರಣ್ಯ ಪರ್ವತ ಮುಂತಾದ ಪವಿತ್ರ ಭೂಭಾಗಗಳು ಎಲ್ಲವೂ ತೀರ್ಥ ಎಂದು

ಕರೆಸಿಕೊಳ್ಳುವುವು. ಇಲ್ಲಿ ಮಾಡುವ ವಿಧಿಪೂರ್ವಕಸ್ನಾನ, ಧ್ಯಾನ ಸೇವೆಯಿಂದ ಪೂರ್ವಜನ್ಮದಲ್ಲಿಮಾಡಿದಪ್ರವಾಹದಂತಿರುವ ಪಾಪಗಳು ನೀಗುವುದು. ನಾನು ಹೇಳಿದ ಹೆಸರು ಅತ್ಯಂತ ರಹಸ್ಯವಾದುದು.''

ಪಾದ್ಮ ಪುರಾಣದ ಉತ್ತರ ಖಂಡ 132 ನೇ ಅಧ್ಯಾಯದಲ್ಲಿ - ಶಿವನು ಹೇಳುವನು. 'ದೇವಿ ನೈಮಿಷಾರಣ್ಯ ಅತ್ಯಂತ ಮಹಾತ್ಮ್ಯೆ ಉಳ್ಳದ್ದು ಪ್ರಥಮ ಶ್ರೇಣಿಯಲ್ಲಿ ಗುರುತಿಸಲ್ಪಡುವ ತೀರ್ಥಕ್ಷೇತ್ರ ಜಂಬೂದ್ವೀಪದಲ್ಲಿ 108 ತೀರ್ಥಗಳಲ್ಲಿ ಇದು ಪ್ರಧಾನವಾದದ್ದು.'

ಪ್ರಯಾಗ, ಪುಷ್ಕರ, ಸೇತು ಮತ್ತು ನೈಮಿಷಾರಣ್ಯ ಇವು ಶೀಘ್ರಸಿದ್ಧಿಕ್ಷೇತ್ರಗಳೆಂದು 'ಬ್ರಹ್ಮಯಾಮಲತಂತ್ರ'ದಲ್ಲಿ ಹೇಳಿದೆ.

ಇವೆಲ್ಲಕ್ಕಿಂತ ರಾಮಾಯಣದ ಹಿನ್ನೆಲೆಯೇ ಈ ಕ್ಷೇತ್ರ ಪರಿಚಯಕ್ಕೆ ಗಟ್ಟಿಯಾದ ಆಧಾರವಾಗಿದೆ. ಶ್ರೀರಾಮನು ಲೋಕ ಕಲ್ಯಾಣಕ್ಕಾಗಿ ಈ ಕ್ಷೇತ್ರದಲ್ಲಿ ಅಶ್ವಮೇಧಯಾಗವನ್ನು ಮಾಡಲು ಸಂಕಲ್ಪಿಸಿ ಲಕ್ಷ್ಮಣ ಭರತರಿಗೆ ಸಿದ್ಧತೆಗಾಗಿ ಆಜ್ಞಾಪಿಸುವನು.

1. ಲಕ್ಷ್ಮಣ ಗೋಮತಿ ನದಿ ತೀರದಲ್ಲಿರುವ ನೈಮಿಷಾರಣ್ಯದಲ್ಲಿ ವಿಶಾಲವಾದ ಯಜ್ಞ ಶಾಲೆಯನ್ನುನಿರ್ಮಿಸಲು ಸೇವಕರಿಗೆ ಆದೇಶಿಸು. ನೈಮಿಷಾರಣ್ಯವು ಅಶ್ವಮೇಧ ಯಾಗಕ್ಕೆ ತುಂಬಾ ಪವಿತ್ರಸ್ಥಳವೂ ಆಗಿದೆ. ಯಜ್ಞವು ನಿರ್ವಿಘ್ನವಾಗಿ ಯಶಸ್ವಿಯಾಗಿ ನೆರವೇರಲಿ. ಎಲ್ಲೆಡೆ ಶಾಂತಿ ಕಾರ್ಯಗಳು ದಾನಗಳು ಭೋಜನಸಂತರ್ಪಣೆ ನಡೆಯಲಿ. ಧರ್ಮಜ್ಞರಾದ ಪ್ರಜೆಗಳು ಸಹಸ್ರಸಂಖ್ಯೆಯಲ್ಲಿ ಇಲ್ಲಿಗೆ ಬಂದು ಪಾಲ್ಗೊಂಡು ಕೃತಾರ್ಥರಾಗಲಿ.

ಎ) ಯಜ್ಞವಾಟಶ್ಚಸು ಮಹಾನ್ಗೋಮತ್ಯಾ
ನೈಮಿಷೇವನೇ
ಆಜ್ಞಾಪ್ಯತಾಂ ಮಹಾಬಾಹೋ
ತದ್ಧಿಪುಣ್ಯಮನುತ್ತಮಮ್
ಬಿ) ಶತಶಶ್ಚಾಪಿ ಧರ್ಮಜ್ಞಃ ಕ್ರತು ಮುಖ್ಯ
ಮನುತ್ತಮಮ್
ಅನುಭೂಯ ಮಹಾಯಜ್ಞನ್ನೈಮಿಷೇ
ರಘುನಂದನ

ರಾಮಾಯಣ ಉ. ಕಾಂಡ. 91-15 ಮತ್ತು 17

2. ಭರತಾ 1 ಲಕ್ಷ ಆನೆ ಕುದುರೆಗಳು ಎತ್ತುಗಳು ಹೊರಡಲಿ, ಎತ್ತಿನ ಗಾಡಿಗಳಲ್ಲಿ ಅಕ್ಕಿ, ಉಪ್ಪು, ಕಡಲೆ, ಎಳ್ಳು, ಹುರುಳಿ, ಉದ್ದಿನ ಮೂಟೆಗಳು, ಎಣ್ಣೆ, ತುಪ್ಪ, ಮೊಸರು, ಚಂದನ, ಸುಗಂಧಗಳು ನೈಮಿಷಕ್ಕೆ ಹೊರಡಲಿ. ನೂರು ಕೋಟಿ ಚಿನ್ನ - ಬೆಳ್ಳಿ ನಾಣ್ಯಗಳು, ಅಡಿಗೆಯವರು, ವೈದಿಕೋತ್ತಮರು, ವೃದ್ಧರು ಬಾಲಕರು, ರಾಣಿ ವಾಸದವರು ಹೊರಡಲಿ, ಹಾಗೆ ನನ್ನ ಪತ್ನಿಯ ಪ್ರತಿಮೆಯನ್ನು ಒಯ್ಯಿರಿ ಎಂದು ಹೇಳಿ ಋತ್ವಿಜರೊಡನೆ ಲಕ್ಷ್ಮಣನನ್ನು ಯಜ್ಞಅಶ್ವದ ರಕ್ಷಣೆಗಾಗಿ ಕಳುಹಿಸಿ ತಾನು ಸೈನ್ಯ ಸಮೇತ ನೈಮಿಷಾರಣ್ಯಕ್ಕೆ ಪ್ರಯಾಣಮಾಡಿದನು. ಭರತನೂ ಶತ್ರುಘ್ನನೊಡನೆ ಹೊರಟನು.

ಚಣಕಾನಾಂ ಕುಲಿತ್ಥಾನಂ ಮಾಷಾಣಾಂ
ಲವಣಸ್ಯ ಚ
ಅತೋನು ರೂಪಂ ಸ್ನೇಹಂ ಚ ಗನ್ಧಂ
ಸಂಕ್ಷಿಪ್ತಮೇವ ಚ
ಉ. ಕಾಂ. 91-20
ಯತ್ವಿಗ್ಭಿರ್ಲಕ್ಷ್ಮಣಂಸಾರ್ಧ
ಮಶ್ವತಂತ್ರೇ ನಿಯೋಜ್ಯ ಚ
ತತೋಭ್ಯಗಚ್ಚ ಕಾಕುತ್ಸ್ಥ ಸಹಸೈನ್ಯೇನ
ನೈಮಿಷಮ್
92 - 2

ನೈಮಿಷದಲ್ಲಿ ಭೂಮಂಡಲದ ಸಮಸ್ತ ರಾಜರು ಕಪ್ಪಕಾಣಿಕೆಗಳನ್ನು ಸಮರ್ಪಿಸುತ್ತಿದ್ದರು. ಎಲ್ಲರೂ ಕೈಂಕರ್ಯಪರರಾಗಿದ್ದರು. ತಪಸ್ಸಿನಲ್ಲಿ ತೊಡಗಿದ್ದ ಮಹರ್ಷಿಗಳು ಯಜ್ಞಶಾಲೆಗೆ ಧಾವಿಸಿದರು.

ವಸಿಷ್ಠೋ ವಾಮದೇವಶ್ಚ
ಜಾಬಾಲಿ ರಥ ಕಾಶ್ಯಪಃ
ವಿಶ್ವಾಮಿತ್ರೋ ದೀರ್ಘತಮಾ
ದುರ್ವಾಸಾಶ್ಚ ಮಹಾತಪಾಃ
ಪುಲಸ್ತ್ಯೋಪಿ ತಥಾ ಶಕ್ತಿ
ಭಾರ್ಗವಶ್ಚೈವ ವಾಮನಃ
ಮಾರ್ಕಂಡೇಯಶ್ಚ ದೀರ್ಘಾಯು
ಮೌದ್ಗಲ್ಯಶ್ಚ ಮಹಾಯಶಾಃ
ಗರ್ಗಶ್ಚ ಚ್ಯವನಶ್ಚೈವ
ಶತಾನನ್ದಶ್ಚ ಧರ್ಮವಿತ್
ಭರದ್ವಾಜಶ್ಚ ತೇಜಸ್ವೀಹ್ಯಗ್ನಿಪುತ್ರಶ್ಚಸುಪ್ರಭ
ನಾರದ ಪರ್ವತಶ್ಚೈವ ಗೌತಮಶ್ಚ
ಮಹಾಯಶಾಃ
ಕಾತ್ಯಾಯನ; ಸುಯಜ್ಞಶ್ಚಹ್ಯ
ಗಸ್ತ್ಯಸ್ತಪಸಾಂನಿಧಿ
96 - 2 ರಿಂದ 6

ಈ ದಿವ್ಯಸ್ಥಳದಲ್ಲೇ - ಎ) ವಾಲ್ಮೀಕಿ ಮಹರ್ಷಿ ಲವಕುಶರನ್ನು ಕರೆತಂದು ರಾಮಾಯಣ ಗಾನ ಮಾಡಿಸಿದ್ದು. ಬಿ) ಸೀತಾದೇವಿಯ ಭೂಪ್ರವೇಶ ವಾದದ್ದು. ಸೀತಾಮಾತೆಯು ಎಲ್ಲ ಮಹನೀಯರ ಸಮಕ್ಷಮದಲ್ಲಿ ''ನಾನು ಪತಿವ್ರತೆಯೇ ಆಗಿದ್ದಲ್ಲಿ, ನನ್ನ ಪತಿಯನ್ನೇ ಮನಸಾ ವಾಚ ಕರ್ಮಗಳಿಂದ ಪೂಜಿಸಿದ್ದೇ ಆಗಿದ್ದಲ್ಲಿ ಭೂತಾಯಿಯು ನನ್ನನ್ನು ಸ್ವೀಕರಿಸಲಿ'' ಎಂದು ಘೋಷಣೆ ಮಾಡುತ್ತಿರುವಾಗಲೇ ಭೂಮಿಯು ಬಿರಿಯಿತು, ಸಿಂಹಾಸನವೊಂದು ಮೇಲೆ ಬಂತು, ಅದರಲ್ಲಿ ಭೂದೇವಿ ಕುಳಿತಿದ್ದಳು. ಸೀತೆಯನ್ನು ಸೆಳೆದು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಇಬ್ಬರೂ ಸಿಂಹಾಸನ ಸಮೇತ ಭೂಪ್ರವೇಶ ಮಾಡಿದರು. ಎಲ್ಲರಿಂದ ಪುಷ್ಪವೃಷ್ಟಿ ಆಯಿತು. ಆದರೆ ಶ್ರೀರಾಮನು ಚಿಂತಾಕ್ರಾಂತನಾದ.

ಎ) ತಥಾಮೇ ಮಾಧವೀ ದೇವೀ ವಿವರಂ
ದಾತುಮರ್ಹತಿ - 97 - 15.
ಬಿ) ಅದ್ಭುತಂಭೂತಲಾದುತ್ಥಿತಂ
ದಿವ್ಯಸಿಂಹಾಸನ ಮನುತ್ತಮಮ್ - 17
ಸಿ) ತಾಮಾಸನಗತಾಂದ್ರಷ್ಟ್ವಾ
ಪ್ರವಿಶ ನ್ತೀಂರಸಾತಲಂ
ಪುಷ್ಪವೃಷ್ಟಿರ ವಿಚಿನ್ನಾ
ದಿವ್ಯಾ ಸೀತಾಮ ವಾಕಿರತ್ -20

ಸೀತಾ ಭೂಪ್ರವೇಶ್ವವಾದ ಸ್ಥಳವನ್ನು 'ಸೀತಾಕುಂಡ' ಎಂದೂ, ಶ್ರೀರಾಮನು ಅಶ್ವಮೇಧಯಾಗವನ್ನು ಮಾಡಿದ ಸ್ಥಳವನ್ನು ದಶಾಶ್ವಮೇಧ ಘಾಟ್ ಎಂದು ಕರೆಯುವರು. ಮಹಾಭಾರತ ಕಾಲದಲ್ಲಿ ಈ ಪ್ರದೇಶವೇ ಮತ್ಸ್ಯರಾಜ್ಯವಾಗಿತ್ತೆಂದು ವಿರಾಟ ಪರ್ವದಲ್ಲಿದೆ. ಇದರ ಸಾಂಕೇತಿಕ ವಾಗಿ ವಿರಾಟನ ಕೋಟೆಯ ಅವಶೇಷಗಳನ್ನು ತೋರಿಸುವರು.

ಇತರ ಐತಿಹ್ಯಗಳು : 1) ಶೌನಕ ಮುನಿ ಉಪಯೋಗಿಸುತ್ತಿದ್ದ ಹವನ ಕುಂಡ ಇಲ್ಲಿದೆ ಎಂದು ತೋರಿಸುವರು. 2) ಶೌನಕ ಮುನಿಯ


ಹೊರಡುವ ಕಾಲಕ್ಕೆ ಹರಿನಾಮವೊಂದೇ ಬರುವುದು.

## ತಿರುಪತಿಯಲ್ಲಿ

# ಶ್ರೀ ಸೀತಾರಾಮ ಕಲ್ಯಾಣ




ಶ್ರೀ ಸೀತಾರಾಮ ಕಲ್ಯಾಣ.



ಶ್ರೀ ಸೀತಾರಾಮ ಲಕ್ಷ್ಮಣ ಮೂರ್ತಿಗಳು

ಕಲ್ಯಾಣೋತ್ಸವದಲ್ಲಿ ಕಾರ್ಯನಿರ್ವಹಣಾಧಿಕಾರಿ

ಶುಭವಿವಾಹ





ತಿರುಪತಿ

ಶ್ರೀ ಗೋವಿಂದರಾಜಸ್ವಾಮಿ

ಆಲಯದಲ್ಲಿ

# ಮುಕುರ ಮಂಟಪ



ಶ್ರೀ ಭೂದೇವಿಯರೊಡನೆ
ಶ್ರೀ ಗೋವಿಂದರಾಜಸ್ವಾಮಿ



ಹೊರಗಿನಿಂದ
ಮುಕುರ ಮಂಟಪ



ಮುಕುರ ಮಂಟಪದಲ್ಲ
ಊಂಜಲ್ ಸೇವೆ.

ಲೋಮಶನ ಪುತ್ರನಾದ ಸೂತ ಪುರಾಣಿಕನಿಗೆ ವಿಷ್ಣುವಿನ ಮಹಿಮೆಯ ಕಥೆಗಳನ್ನು ಇಲ್ಲೇ ಹೇಳಿದನೆಂದು ಹಾಗೂ ಎಲ್ಲಾ ಮಹಾಪುರಾಣಗಳು ಇಲ್ಲೇ ರಚಿತವಾದವು ಮತ್ತು ವ್ಯಾಸರು ಪುರಾಣ ಕಾಲಕ್ಷೇಪವನ್ನು ಇಲ್ಲೇ ಮಾಡಿದ್ದು ಎಂದೂ ಹೇಳುವರು. 3) ಸತ್ಯನಾರಾಯಣ ವ್ರತ ಮಹಿಮೆಯನ್ನು ಪ್ರಥಮವಾಗಿ ಇಲ್ಲೇ ಹೇಳಲ್ಪಟ್ಟಿತು. 4) ಶ್ರೀಹರಿಯು ಸದಾ ಅರಣ್ಯರೂಪದಲ್ಲಿ ವಾಸಿಸುವನೆಂದೂ ಶಿವನ ಕುಶಹಸ್ತವೂ ಇಲ್ಲಿದೆ ಎಂದು ಹೇಳುವರು. 5) ಸೂತನು ಸಹಸ್ರಾರು ಋಷಿಗಳಿಗೆ ಪುರಾಣಗಳನ್ನು ಅವುಗಳಲ್ಲಿ ಬರುವ ಆಖ್ಯಾಯಿಕೆಗಳನ್ನು ಹೇಳಿದನೆಂದು 'ಸ್ತೋತ್ರರತ್ನಾಕರ' 'ಯೋಗಿನೀತಂತ್ರ' ಮುಂತಾದ ಕೃತಿಗಳು ಸ್ಪಷ್ಟಪಡಿಸುವುವು. ಇವುಗಳ ಸಾಂಕೇತಿಕವಾಗಿ 'ಗದ್ದಿ' ಎಂಬ ಮಠ / ಆಶ್ರಮಗಳು ಇವೆ. ಉದಾ – ಸೂತಗದ್ದಿ, ವ್ಯಾಸಗದ್ದಿ, ಶುಕಮಠ ಇತ್ಯಾದಿ. ಭಾರತೀಯರ 51 ಪೀಠಸ್ಥಾನಗಳ ಪೈಕಿ ಇದೂ ಒಂದು. ಗೋಮತಿ + ಚಕ್ರತೀರ್ಥವೂ ಸೇರಿ ಒಟ್ಟು 20 ತೀರ್ಥಗಳಿವೆ. ಲಲಿತ, ಹನುಮ ಸತ್ಯನಾರಾಯಣ ಮುಂತಾದ ಮಂದಿರಗಳೂ ಭಜನ ಮಂದಿರಗಳೂ ಇವೆ.

ಕಲಿಯನರ ಮಂಗಳಾಶಾಸನ - ಪೆರಿಯ ತಿರುಮೊಳಿ 1-6-1 ರಿಂದ 10 ಪದ್ಯಗಳು

ಪರಕಾಲ ಯತಿಗಳು ತಾವು ನೈಮಿಷಾರಣ್ಯದ ಮಧ್ಯದಲ್ಲಿ ಆರ್ತರಾಗಿ ನಿಂತಂತೆ ಭಾವಿಸಿಕೊಂಡು ಅನನ್ಯಗತಿತ್ವವನ್ನು ಆಕಿಂಚನ್ಯವನ್ನು ತೋಡಿಕೊಳ್ಳುವರು. ತಮ್ಮ ಪೂರ್ವಾಶ್ರಮದ ಕಹಿ ಪ್ರಸಂಗಗಳನ್ನು ವಿಷಾದದಿಂದ ಹೇಳಿ, ಅವುಗಳನ್ನೆಲ್ಲಾ ಮನ್ನಿಸಿ ಕೃಪೆ ಮಾಡಿದ ಭಗವಂತನ ಅಸೀಮವಾದ ಕಾರುಣ್ಯವನ್ನು ನೆನೆನೆನೆದು ಶರಣಾಗತಿ ಯನ್ನನುಷ್ಠಿಸುವರು.

ಎ. ನಿನ್ನಲ್ಲಿ ಮಹಾವಿಶ್ವಾಸವನ್ನು ಮೂಡಿಸಿದವನೂ ನೀನೆ, ಪುರುಷಾಕಾರ ಭೂತೆಯಾದ ಹರಿಲಕ್ಷ್ಮಿತಾಯಾರ್ ಕೃಪೆ ನನ್ನ ಮೇಲೆ ಬೀಳುವಂತೆ ಮಾಡಿದವನೂ ನೀನೇ - 9

ಬಿ. ನನ್ನಲ್ಲಿರುವ ದೋಷವೆಂದರೆ ಹಿಂದೆ ನಾನು ಸ್ತ್ರೀ ಲೋಲನಾಗಿ ಐಹಿಕ ಭೋಗಗಳಲ್ಲೇ ಕಾಲಕಳೆದೆ.

ವಾಳ್‌ನಿಲಾ ಮುರುವಲ್ ಶಿರನುದಲ್ ಪೆರುಂತೋಳ್ ಮಾದರಾರ್ ವನ ಮುಲೈ ಪಯನೇ ಪೇಣಿನೇನ್ ಅದನ್ನೈ ಪಿರೈ ಎನಕರುದಿ -1

ಸಿ. ಅಂಥಾ ಸ್ತ್ರೀಯರ ದಾಸನಾಗೇ ಇದ್ದು ಬಿಟ್ಟೆ ನಿನ್ನ ವಿಷಯಗಳಲ್ಲಿ ಲಕ್ಷ್ಯವೇ ಇಲ್ಲ.

ಶಿಲಂಬು ಅಡಿ ಉರವಿನ್ ಕರುನೆಡುಂ ಕಣ್ಣಾರ್ ತಿರತ್ತನ್ ಆಯ್ ಅರತ್ತೇಯೇ ಮರಂದು - -2

ಡಿ. ಜೂಜುಗಾರನಾಗಿದ್ದೆ ಕಳ್ಳನಾಗಿದ್ದೆ ಸ್ತ್ರೀಯರನ್ನೇ ಹಿಂಬಾಲಿಸುವ ಪ್ರವೃತ್ತಿ ಉಳ್ಳವನಾಗಿದ್ದೆ.,

ಶೂದಿನ್ನೈ ಪೆರುಕ್ಕಿ ಕಳವಿಣ್ಣೈ ತುಣಿಂದು ಮಡಂದೈಯರಂ ತಿರುಕ್ಕುಕಾದಲೇ ಮಿಹತ್ತು ಕಂಡವಾತಿರಿಂದ -3

ಇ. ಕೈಹಿಡಿದ ಧರ್ಮಪತ್ನಿಯನ್ನು ಲಕ್ಷಿಸಲಿಲ್ಲ ಏಕೆಂದರೆ ಪರಸ್ತ್ರೀಯರಲ್ಲೇ ವ್ಯಾಮೋಹಿತ ನಾಗಿದ್ದೆ.

ಮನ್ನೈವಿಯೆ ತುರಂದು ಪಿರರ್‌ಪೊರುಳ್ ತಾರಮ್ ಎನ್ರು ಇವತ್ತೈ -4

ಎಫ್. ನಾಲಿಗೆಯ ಮೇಲೆ ಲಕ್ಷ್ಯವಿಲ್ಲದೆ ಕೆಟ್ಟ ಮಾತುಗಳನ್ನೆ ಆಡಿದೆ. ಕ್ರೂರವಾದ ಕೃತ್ಯಗಳೇ ನನ್ನ ದಿನಚರಿಯಾಗಿತ್ತು.

ಕಡುಂ ಶೋವಾರ್ ಕಡಿಯಾರ್ -5

ಜಿ. ಮುಖ್ಯವಾಗಿ ನನ್ನ ದುರ್ಬುದ್ಧಿಯಿಂದಲೇ ಮೆರೆಯುತ್ತಿದ್ದೆ. ಆಗ ನಾನು ನಿನ್ನನ್ನು ನೆನೆಯಲಿಲ್ಲ ಕೊಡಿಯ ಮನತ್ತಾಲ್ -6

ಕಲಿಯ ಪ್ರಭಾವ ನನ್ನ ಮೇಲೆ ಬೀಳದಂತೆ ನೀನು ಕೃಪೆಮಾಡಿದೆ. ನನ್ನ ದುಷ್ಕೃತ್ಯಗಳಿಗೆ ತಕ್ಕಂತೆ ದೊಡ್ಡದಂಡನೆಯೇ ಕಾದಿದೆ ಎಂದು ಭೀತನಾಗಿದ್ದೆ, ಯಮಲೋಕದಲ್ಲಿ ಎಂಥಾ ಘೋರ ಶಿಕ್ಷೆ ಕಾದಿದೆಯೋ ಎಂದು ನಡುಗುವಾಗಲೇ ನಿನ್ನ ಕರುಣಾ ಪ್ರವಾಹವು ಅವುಗಳನ್ನು ಕೊಚ್ಚಿಕೊಂಡು ಹೋಯಿತು. ಯಮ ಪುರವನ್ನು ಗೆದ್ದೆ ನಾನು. ನಿನ್ನದಯೆ ನನ್ನನ್ನು ಶರಣಾಗತನನ್ನಾಗಿ ಮಾಡಿತು. ನಿನ್ನಲ್ಲಿ ಶರಣು ತಂದೆಯೇ ನಾನು ಬದುಕಿಹೋದೆ.



ನಮನಾರ್ ಪಾಡಿಯ್ಯೆ ಪೆರಿದುಂಪರಿಶು ಅಳಿತಿಟ್ಟೇನ್, ವಂದು ಉನ್ ತಿರುವಡಿ ಅಣ್ಣೆಂದೇನ್ ನೈಮಿಷಾರಣಿಯುತ್ತುಳ್

ಇಂದು ಭಕ್ತರು ಮೊದಲು ನೇಮಿ ತೀರ್ಥದಲ್ಲಿ (ಚಕ್ರತೀರ್ಥ) ಸ್ನಾನಮಾಡಿ ಅನಂತರ ಗೋಮತಿಯಲ್ಲಿ ಮಿಂದು ಅರಣ್ಯವನ್ನು ಪ್ರವೇಸಿಸುವರು. ದೇವರಾಜ - ಹರಿಲಕ್ಷ್ಮೀಪುಂಡರೀಕವಲ್ಲಿ ಸಮೇತ ಒಂದು ಗುಡಿ ಇದೆ. ಇದರ ಸಮೀಪದಲ್ಲೇ ಲಲಿತಾಮಂದಿರವೂ ಇದೆ. ಯಜ್ಞಫಲ ರೂಪವಾದ ಶಕ್ತಿದೇವತೆಯೇ ಈ ಲಲಿತಾದೇವಿ ಎಂದು ಹೇಳುವರು. ಕ್ಷೇತ್ರ ಪ್ರಗತಿಯಿಂದ ಒಂದು ಪಟ್ಟಣವೂ ನಿಂಸಾರ್ ರೈಲ್ವೇನಿಲ್ದಾಣವೂ ಇದೆ. ಹರಿದ್ವಾರ ಹೃಷಿಕೇಶಯಾತ್ರೆ ಮುಗಿಸಿದ ಭಕ್ತರು ಪ್ರಯಾಗಕ್ಕೆ ಹೋಗುವ ಮೊದಲು ನೈಮಿಷವನ್ನು ಸೇವಿಸುವರು. ಫಾಲ್ಗುಣ ಅಮಾವಾಸ್ಯೆಯಿಂದ ಮಾಘ ಪೌರ್ಣಮಿಯ ವರೆಗೆ ಇಲ್ಲಿ ಸಡಗರ ಸಂಭ್ರಮ ಪೂಜೆ, ಉತ್ಸವಗಳು ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುವುವು. ದಕ್ಷಿಣದ ಸಂಪ್ರದಾಯ ರೀತಿಯಲ್ಲಿ ಪೂಜೆ ಉತ್ಸವಗಳು ಜರುಗುವುವು. ಅಹೋಬಿಲ ಮಠದ ಶಾಖೆ ಒಂದಿದೆ. ಈ ಪರಂಪರೆಯಲ್ಲಿ ಬರುವ 43 ನೆ ಸ್ವಾಮಿಗಳಾದ ತೇವನಾರ್ ವಿಳಾಹಂ ವೀರರಾಘವ ಶಠಕೋಪರು ಇಲ್ಲೇ ಬೃಂದಾವನಸ್ಥರಾದರು. 44ನೇ ಸ್ವಾಮಿಗಳಾದ ಮುಕ್ಕೂರ್ ಮುನಿಗಳು ಇಲ್ಲೇ ತುರಿಯಾಶ್ರಮವನ್ನು ಸ್ವೀಕರಿಸಿದರು.

ಗೋವಿಂದನಡಿದಾವರೆಗಳಲ್ಲಿ ಶರಣು.

# ಮುರಳಿಯ ನಾದವ ಕೇಳಿ

- ಸುಮನ ಬದರೀನಾಥ್.

ಭಾಗವತ ದಶಮಸ್ಕಂಧದಲ್ಲಿ ಬರುವ ಗೋಪಿಗೀತ, ಭಾವಬಂಧುರತೆಯಿಂದ, ರಸದೃಷ್ಟಿಯಿಂದ ಅನನ್ಯವಾಗಿವೆ. ಕರ್ಣಾಟಕದ ಹರಿದಾಸರುಗಳು, ಭಾಗವತದಿಂಧ ಪ್ರೇರಿತರಾಗಿ ತಮ್ಮ ಕೃತಿಗಳಲ್ಲಿ ಶ್ರೀಕೃಷ್ಣನ ಬಾಲಲೀಲೆಗಳನ್ನು ಬಹುಸುಂದರವಾಗಿ ವರ್ಣಿಸಿದ್ದಾರೆ. ವೇಣುಗೀತೆಗಳೆಂದೇ ಹೆಸರಾಗಿರುವ ಕೃತಿಗಳಲ್ಲಿ ಕೃಷ್ಣನು ಕೊಳಲನೂದುವ ಭಂಗಿ, ಅದರ ರಾಗ ವೈಖರಿ, ವೇಣುನಾದದಿಂದ ಗೋಪಿಯರಿಗಾದ ಭಾವಪಲ್ಲಟ, ಯಮುನಾನದಿ, ಗೋಕುಲ, ಬೃಂದಾವನ ಹಾಗೂ ಪಶುಪಕ್ಷಿಗಳ ಮೇಲೆ ವೇಣುನಾದದಿಂದುಂಟಾದ ಪರಿಮಾಮ - ಇವು ಬಹು ರಮ್ಯವಾಗಿ ಚಿತ್ರಿತವಾಗಿವೆ. ಶ್ರೀಪಾದರಾಯರಿಂದ ಮೊದಲ್ಗೊಂಡು, ಪುರಂದರದಾಸ, ವಿಜಯದಾಸರಾದಿಯಾಗಿ ವಿದ್ಯಾಪ್ರಸನ್ನ ತೀರ್ಥರವರೆಗೂ ಹರಿದು ಬಂದಿರುವ ಈ ಭಕ್ತಿಯ ಹೊನಲಿನ ಯಮುನೆಯ ದಡದಲ್ಲಿ ಕೇಳಿಬರುತ್ತಿರುವ ಮುದ್ದುಕೃಷ್ಣನ ಮುರಳೀವಾದನ ಭಕ್ತ ಹೃದಯಗಳಿಗೆ ದೈವಿಕ ಆನಂದವನ್ನುಣಿಸಿ ತಣಿಸುತ್ತ ಇದೆ. ಈ ಕೃತಿಗಳ ನಾವೆಯನ್ನೇರಿ ಬೃಂದಾವನಕ್ಕೆ ಹೋಗೋಣ ಬನ್ನಿ.

ಶ್ರೀಪಾದರಾಯರು ರಚಿಸಿರುವ ವೇಣುಗೀತೆಗಳು ತಮ್ಮ ನಾದ ಮಾಧುರ್ಯಕ್ಕೂ, ಭಾವವಿಲಾಸಕ್ಕೂ, ಪದಲಾಲಿತ್ಯಕ್ಕೂ ಪ್ರಖ್ಯಾತವಾಗಿವೆ. ಇವುಗಳಲ್ಲಿ ಶ್ರೀಕೃಷ್ಣನಿಗೂ ಗೋಪಿಯರಿಗೂ ಇದ್ದ ದೈವಿಕ ಸ್ನೇಹ, ಪ್ರಕೃತಿಯಲ್ಲಿ ಅದರ ಪ್ರತಿಫಲನ ಎದ್ದು ಕಾಣುತ್ತವೆ. 'ತುಡುಗಾಯ ಬಂದ, ಗೋಪಿಯ ಕಂದ 'ಆನಂದಧಿಂದ' - ಎಂದು ಆರಂಭವಾಗುವ ಒಂದು ವೇಣುಗೀತದಲ್ಲಿ ಶ್ರೀಕೃಷ್ಣನ ಮುರಳೀನಾದದಿಂದ ಆಕರ್ಷಿತರಾದ ಗೋಪಿ ಯರು ಆ ಆನಂದಾತಿರೇಕದಲ್ಲಿ ಹೇಗೆ ತೆಬ್ಬಿಬ್ಬಾದರು ಎಂಬ ಚಿತ್ರ ಚಿತ್ತಾಕರ್ಷಕವಾಗಿ ಮೂಡಿಬಂದಿದೆ. ಆ ಗೋಪಿಯರು 'ತಂದೆಯ ಕಂದನೆಂದು ಕಂಕುಳೊಳಗಿಟ್ಟು ಕಂದನ ಕೆಳಗಿಟ್ಟು ಹೊರಗೋಡಿ' ಬಂದರು. ತಮ್ಮ ಆಭರಣಗಳನ್ನೆಲ್ಲ 'ಅಂದಿಗೆ ಗೆಜ್ಜೆ ಕಿವಿಯೊಳಗಿಟ್ಟು' ಅಸ್ತವ್ಯಸ್ತವಾಗಿ ತೊಟ್ಟರು. ಅವರು ಮುರಳಿಯ ಸ್ವರಕ್ಕೆ ಮೋಹಿತರಾಗಿ 'ಮನೆ ಮನೆಯೊಳಗೆ ತರಳರ ಬೆದರಿಸಿ ಮಾರ್ಜಾಲಕೆ ಮೊಲೆ ತ್ವರಿತದಿ ಉಣಿಸುತ' ಮಾಧವನಲ್ಲಿ ಮನವಿಟ್ಟು ಮೈಮರೆತವರಾಗಿ, ಪರಮಾತ್ಮನ ನೆನೆದು ಬಿಸಿಲು ಚಳಿ ಮಳೆಯಲ್ಲಿ ಹೊರಗೆ ಹೊರಟುಬಂದರು. ಈ ರೀತಿ ಮೈಮರೆತು ಬಂದ ಮಾನಿನಿಯರೆದುರಿಗೆ ಮದನ ಶತಕೋಟಿ ತೇಜನಾದ ಶ್ರೀಕೃಷ್ಣನು ನಿಂತು 'ಅಧರಾಮೃತ ಪಾನ ಮಾಡಿದರೆಂದ' ಬದಿಯಲ್ಲಿ ಬಂದು ಕುಳ್ಳಿರಿ ಎಂದ. ಬಾಯಾರಿದಿರಿ ಎಂದ. ಈ ದಿವ್ಯ ಸಮಾಗಮವನ್ನು ಸಮೀಕ್ಷಿಸಿದ ಸುರ ಸ್ತ್ರೀಯರು ನಾಟ್ಯವಾಡಿದರು. 'ಮಧುಸೂದನ ಭಕ್ತರ ಕಾಯ್ದುದಕೀ ವಿಧದೊಳಗಾಡಿದ' ಇವೆಲ್ಲವೂ ಪರಮಾತ್ಮನು ತನ್ನ ಭಕ್ತರಿಗಾಗಿ ಕೈಕೊಂಡ ಒಂದು ಲೀಲೆ ಎಂಬ ದಿವ್ಯಭಾವ ಹಾಡನ್ನೆಲ್ಲಾ ತುಂಬಿ ನಿಂತಿದೆ.

'ರಂಗ ಕೊಳಲನೂದುತ ಬಂದ ಯಶೋದೆಯ ಕಂದ' ಎಂದು ಆರಂಭವಾಗುವ ಮತ್ತೊಂದು ಗೀತದಲ್ಲಿಯೂ ಆನಂದಾತಿ ರೇಕವೇ ಹೊನಲಾಗಿ ಹರಿದಿದೆ. ಶೃಂಗಾರ ಭಾವವನ್ನು ಉದ್ರೇಕಿಸುವ ಸುಂದರ ಕೊಳಲನ್ನು ಶ್ರೀಕೃಷ್ಣನು ಧ್ವನಿಮಾಡಲು ಗೋಪ ಸ್ತ್ರೀಯರು ಆ ದಿವ್ಯ ಸ್ವರೂಪವನ್ನು ಕಂಡು ಶ್ರೀಕೃಷ್ಣನಲ್ಲಿ ಮನಸ್ಸನ್ನು ವಿಲೀನಗೊಳಿಸಿದರು. 'ಹಂಗ, ವಿಹಂಗ, ಭುಜಂಗ, ನವಿಲು, ಸಾರಂಗ, ಗಿಣಿಯು, ಮಾತಂಗಮರಿಯು, ಕುರಂಗಗಳ' ಮಧ್ಯೆ, ಶ್ರೀಕೃಷ್ಣನಿರುವಾಗ ಅವನ ಪಾದಸನ್ನಿಧಿಗೆ ಬಂದು ಗೋಪಸ್ತ್ರೀಯರೂ, ವೇದಾಭಿಮಾನಿ ದೇವತೆಗಳೂ ನಮಸ್ಕರಿಸಿದರು. ಶ್ರೀಕೃಷ್ಣನ ದರ್ಶನವಾದೊಡನೆ ಇತರ ಎಲ್ಲ ಆಸೆಗಳೂ ಹೃದಯದಿಂದ ದೂರಾಗಲು, ಅತ್ಯದ್ಭುತವಾಗಿ ಮತ್ತು ಬಗೆಬಗೆಯಾಗಿ ಶ್ರೀಕೃಷ್ಣನ ರೂಪ ವ್ಯಕ್ತವಾಗುತ್ತಿರಲು, ಎಲ್ಲರೂ ತಮ್ಮ ಹೃದಯ ಮನಗಳನ್ನು ಅವನಲ್ಲಿ ಐಕ್ಯಗೊಳಿಸಿದರು. ಶ್ರೀಕೃಷ್ಣನು ತನ್ನೆಡೆಗೆ ಬಂದ ಗೋಪಿಕಾ ಸ್ತ್ರೀಯರನ್ನು, ಋಷಿಪುಂಗವರನ್ನು, ದೇವತೆಗಳನ್ನು ಪ್ರಾಣಿಗಳನ್ನು ಮೈಮರೆವಂತೆ ಮಾಡಲು ಕೊಳಲನ್ನು ಇನ್ನೂ ವಿಶೇಷವಾಗಿ ನುಡಿಸಿದನು. ಗೋಪಸ್ತ್ರೀಯರು 'ಬಂಗಾರಬಟ್ಟಲೊಳಗೆ ಅಂದು ಕ್ಷೀರವನು ತಂದು', 'ಮಂಗಳ ಮಹಿಮನು ನೀನೆಂದು ಅತಿಭಕುತಿಯೊಳಂದು ತುಂಗ ವಿಕ್ರಮನ ಪದಂಗಳಿಗೆರಗಲು' ಮಹಾಮಹಿಮನಾದ ಶ್ರೀಕೃಷ್ಣನು ಆ ಸ್ತ್ರೀಯರಿಗೆ ಆನಂದವನ್ನು ವಿಪುಲವಾಗಿ ಅನುಗ್ರಹಿಸುತ್ತಾ ಕೊಳಲನೂದುತಲಿದ್ದ. ಗೋಪಸ್ತ್ರೀಯರು ಮಂದರಧರನಲ್ಲೇ ಮನವಿಟ್ಟು, ಮುಕುಂದಾಂಘ್ರಿಯ, ಮುದದಿ ಸ್ಮರಿಸಿ ಬರುವಂದ ನೋಡಿ ಗೋವಿಂದ ಕೊಳಲ ಬಹು ಅಂದದೊಳಗೆ ಆ ಇಂದುವದನೆಯರ ಮನ ಚಂದ್ರನುದಯದಂತೆ ಆಯ್ತು. ರಂಗವಿಠಲನ ದಯದಿಂದ ನೋಡಿದ ಆ ಪುರಂಧ್ರಿಯರನ್ನು. ಇಂತಹ ದಿವ್ಯದರ್ಶನವನ್ನು ಕಂಡು ಧನ್ಯರಾಗಿ ಆ ಧನ್ಯತೆಯನ್ನು ನಮಗೂ ದಯಪಾಲಿಸಿದ್ದಾರೆ ಶ್ರೀಪಾದರಾಯರು.

'ಕೊಳಲನೂದುವ ಚದುರನ್ಯಾರೆ ಪೇಳಮ್ಮಯ್ಯ' ಎಂದು ಪ್ರಶ್ನಿಸಿರುವ ವ್ಯಾಸರಾಯರು ಆ ಚದುರ ಶ್ರೀಕೃಷ್ಣನೆ ಎಂದು ಹೇಳಿ ಅವನು ಕೊಳಲನೂದುವ ಪರಿಯನ್ನು ಮನದುಂಬಿ ಬಣ್ಣಿಸಿದ್ದಾರೆ. ಕೃಷ್ಣನು ಕೊಳಲನೂದಲು 'ನಾದದಿ ತುಂಬಿತು ಗೋವರ್ಧನ ಗಿರಿ, ಯಾದವಕುಲ ನಭ ನೆರೆದಿತು ಖಗಕುಲ' ಕೃಷ್ಣನ ಕೊಳಲ ದಿವ್ಯಗಾನಸುಧೆಯನ್ನು ಸವಿದು ಹಸಿವು ಹಿಂಗಿ 'ಮೇವು ಮರೆತವು ಗೋವುಗಳೆಲ್ಲ' ನಾದರಿಹರಿಯನ್ನಾಲೈಸಲು 'ಸಾವಧಾನದಿ ಹರಿದಳು ಯಮುನಾ'. ಕೊಳಲ ನಿನದ ದೇವಲೋಕವನ್ನೂ ಆವರಿಸಿ ಆನಂದ ತುಂದಿಲರಾದ 'ಸುರರು ಸುರಿದರಾಕಾಶದಿ ಸುಮಗಳ' ಅವು ಬಂದು ಶ್ರೀಕೃಷ್ಣನ ಮುಡಿಯನ್ನೂ ಅಡಿಯನ್ನೂ ಅಲಂಕರಿಸಿದವು.

ಮತ್ತೊಂದು ವೇಣುಗೀತದಲ್ಲಿ 'ಅಂಗನೆ ನೋಡುವ ಬಾರೆ ಕಂಗಳು ಪಡೆದ ಫಲವ ರಂಗ ಕೊಳಲನೂದುತ ಲೋಲಾಡುತಲಿಪ್ಪುದ' ಎಂದು ಆನಂದ ಲಹರಿಯಲ್ಲಿ ಕುಣಿದಾಡುತ್ತಾ, ಕೊಳಲ ದನಿಯಿಂದ ಆಗುವ ಚಮತ್ಕಾರಗಳನ್ನು ಹಾಡಿದ್ದಾರೆ. 'ದಾನವಾಂತಕನ ಕೈಯ ವೇಣು ಮಾಡಿದ ಸುಕೃತ ಫಲವ, ಪ್ರಾಣ ದೊಲ್ಲಭೆಯರೆಲ್ಲ ಮಾಣದೆ ಸವಿವ ಆಧರಪಾನವ ತಾ ಸೂರೆ ಗೊಂಬುದ' ಕಂಡು ಅಚ್ಚರಿಪಡುತ್ತಾರೆ. ಬೃಂದಾವನದಲ್ಲಿ' ನೆಲಸಿದ ವೃಕ್ಷಗಳೇನು ಸುಕೃತವ ಮಾಡಿದವೋ. ಭೂಲತಾವನದ ಪುಣ್ಯ ಗಳೇನೆಂಬೆ, ನಾನು ಮಾಡಿದ ಪೂರ್ವ ಸಂಚಿತ ಏನು ಒದಗಿತೊ, ಕೃಷ್ಣರಾಯನ ವೇಣುಗೀತಾಮೃತವ ಸವಿವರೆ' ಎಂದು ಧನ್ಯತೆಯನ್ನು ಅನುಭವಿಸಿ ನಮಗೂ ಹಂಚಿದ್ದಾರೆ. ಈ ಹಾಡಿನಲ್ಲಿ ಕೊಳಲಗಾನದಿಂದ ಅಲ್ಲಿದ್ದ ಪಶುಪಕ್ಷಿಗಳ ಮೇಲಾದ ಪರಿಣಾಮವನ್ನು ಪ್ರಭಾವಕಾರಿಯಾಗಿ ಪಡಿಮೂಡಿಸಿದ್ದಾರೆ. 'ಹುಲ್ಲೆಯ ಹಿಂಡುಗಳೆಲ್ಲ ಫುಲ್ಲನಾಭನ ಕೊಳಲ ಸೊಲ್ಲನಾಲೈಸುತ ಕೃಷ್ಣನಲ್ಲಿ ಚಿತ್ತವೆರಗಿ ಅನ್ಯವಿಲ್ಲದಿಪ್ಪ ಸಡಗರವನ್ನು' ಬಣ್ಣಿಸಿ ಹಾಗೆಯೇ 'ಅರಗಿಳಿ ಹಂಸ ಕಲರವಗಳುಳುಹಿ ಪರಮಪುರುಷನ ಧ್ಯಾನದಿಂದ ಯೋಗಿಗಳ ತೆರದಿ' ಮೈಮರೆತಿರುವುದನ್ನು ನಮ್ಮ ಕಣ್ಣಿಗೂ ಕಟ್ಟುವಂತೆ ಚಿತ್ರಿಸಿದ್ದಾರೆ. ಮಧುರಾತಿ ಮಧುರವಾದ ಕೊಳಲಗಾನವನ್ನು ಕೇಳಕೇಳುತ್ತಾ 'ಕರಗಿ ಕಂಬನಿಗಳನೆ ಸುರಿಸುತ್ತಾ ಸರಸಿಜಾಕ್ಷನ ವೇಣುಗೀತದ ಸರಗಳನಾಲೈದು ಬಾಹ್ಯವ ತೊರೆದು, ಪರಮಹಂಸರಂತೆ ನಿರುತ ಕೃಷ್ಣನ ಪಾದಯುಗಳ ಸರಸಿಜದಲ್ಲೋಲಾಡುವ ಸುಖದ ಭಾವ ಸಮಾಧಿಯನ್ನು ತಾವೂ ಅನುಭವಿಸಿ ನಾವೂ ಅನುಭವಿಸುವಂತೆ ಮಾಡಿದ್ದಾರೆ.

ಉಡುಪಿಯ ಶ್ರೀಕೃಷ್ಣನ ಉಪಾಸಕರಾದ ವಾದಿರಾಜರು ತಮ್ಮ ಒಂದು ಕೀರ್ತನೆಯಲ್ಲಿ ಕೊಳಲನೂದುತ ತಮ್ಮ ಬಗೆಗಂಗಳಿಗೆ ಗೋಚರಿಸಿದ ಶ್ರೀಕೃಷ್ಣನ ಸುಂದರರೂಪವನ್ನು ಬಗೆ ಬಗೆಯಾಗಿ ಬಣ್ಣಿಸಿದ್ದಾರೆ. 'ಅರಳೆಲೆ ಮಾಗಾಯಿ, ಮುಂಗೈಯಲಿಟ್ಟು ಸರಭಂಗಿ ಕೂಡಿ' ತ್ರಿಭಂಗಿಯ ವರವೇಣುವನು ತನ್ನಂಗೈಯಲಿಟ್ಟು ಅಧರದಲ್ಲೂದಿದ ರಂಗನ ರೂಪ ಎಷ್ಟು ಆಕರ್ಷಕ! ಆ ಮುರಲೀಗಾನವ ಕೇಳಿದ ಪಶುಪಕ್ಷಿಗಳು 'ಹಸುಳೆಯ ನೆನೆಯುತ್ತ ಮನದಲ್ಲಿ ಪರವಶವಾದವು ಆ ಕ್ಷಣದಲ್ಲಿ. ' ವಿವಿಧ ರಾಗಗಳನ್ನು ಪಾಡಿ, ಇಳೆಯೊಳು ಗೀತವ ಕಲಿಸಿದ, ಇಂತು ಒಲಿದು ವಿಠಲ ನಮ್ಮ ಪಾಲಿಸಿದ. ಹರಿಯ ವೇಣುನಾದದ ಈ ಹೊಸಪರಿ ಅತಿ ಹರುಷವನ್ನಿತ್ತು ಭಕ್ತರನ್ನು ಪರಿಪಾಲಿಸಿತು. ಇಂದಿಗೂ ಎಂದೆಂದಿಗೂ ಪಾಲಿಸುತ್ತಿರುತ್ತದೆ.

ಪುರಂದರ ದಾಸರು - ಕಾಶೀ ಪೀತಾಂಬರ ಕೈಯಲಿ ಕೊಳಲು ಹಿಡಿದು ಗೋಕುಲದಲ್ಲಿ ನಲಿದಾಡಿದ ಕೃಷ್ಣನನ್ನು ಕಂಡು - 'ಕೊಳಲ ನೂದುತ್ತ ಬಂದ ನಮ್ಮ ಗೋಪಿಯ ಕಂದ, ಕೊಳಲನೂದುವುದು ಬಲು ಚೆಂದ, ಮುತ್ತಿನಾಭರಣ ತೊಟ್ಟು ಹಸ್ತದಿ ಕೊಳಲ ಕೊಟ್ಟು ಕಸ್ತೂರಿ ತಿಲಕವನ್ನಿಟ್ಟು, ತುತ್ತುರತುರವೆಂಬ ನಾದವ ಪಿಡಿಯೆ' ಎಂದು ಕೊಳಲನಾಲೈಸಿ ಹಿಗ್ಗಿದರು. 'ರಂಗ ಕೊಳಲ ನೂದಲಾಗಿ ಮಂಗಳ ಮಯವಾಯ್ತು ಧರೆ ಜಗಂಗಳು ಚೈತನ್ಯಮರೆದು ರಂಗಪರವಶ ವಾದವು.' ಬಾಡಿದ ಬರಲು ಫಲಗೊಂಚಲು ಬಿಡುವಂತೆ ಚೇತನ ದಾಯಕವಾಗಿದ್ದ ಕೊಳಲ ಗಾನ ಕೇಳಿ 'ಓಡಾಟ ವೈರಾಟ ಬಿಟ್ಟು ಖಗಮೃಗ ಗಾಢನಿದ್ರಾವಶವಾದವು.' ಯಮುನೆ ತುಳುಕಿ ಚೆಲ್ಲಾಡಿನಿಂತಳು. ಮೇಘಾಳಿ ಧಾಳಿಟ್ಟವು. ಬಗೆ ಬಗೆಯ ಪುಷ್ಪಗಳು ಅರಳಿ ಪರಿಮಳಗೂಡಿ ನೀಲಾಂಗನಂಘ್ರಿಗೆರಗಿದವು. ಈ ಮಂಜುಳ ಸಂಗೀತವನಾಲೈಸಿ ಗೋಪಾಂಗನೆಯರೆಲ್ಲ 'ಬುದ್ಧಿಸೂರಾಡಿ ಆನಂದವಾರಿಧಿಯಲ್ಲಿ ಬಿದ್ದು ಪರವಶರಾದರು.' 'ಸಿದ್ಧ ಮುನಿಜನರಿದ್ದ ಸಮಾಧಿಯೊಳೆದ್ದು ಕುಣಿದರು, ಗೆದ್ದರು ಭವಸಮುದ್ರವ'. ಸಾಮವೇದ ನಮೋನಮೊ ಎನ್ನೆ ಶ್ರೀಕೃಷ್ಣನು ಪೊಂಗೊಳಲಲ್ಲಿ ನಾಮಕ್ರಿಯ, ಮೇಘರಂಜಿನಿ ಮುಂತಾದ ರಾಗಗಳನ್ನು ನುಡಿಸಿದನೆನೆ - ಹೀಗೆ, ಜಗತ್ತಿನ ಚರಾಚರ ವಸ್ತುಗಳೆಲ್ಲ ಮುರಳಿವಾದನದ ಗಾನ ಮಾಧುರ್ಯಕ್ಕೆ ತಲ್ಲೀನರಾಗಿ ತಲೆದೂಗಿದವು.

ಕನಕದಾಸರು 'ಯಾದವರಾಯ ಬೃಂದಾವನದೊಳು ವೇಣುಗಾನವ ಮಾಡುತಿರೆ' ಎಂಬ ಗೀತೆಯಲ್ಲಿ ಕೃಷ್ಣನು 'ಕರದಲಿ ಕೊಳಲನೂದುತ್ತ ಪಾಡುತ್ತ ಸರಿಗಮಪದನಿ ಸ್ವರಗಳ ನುಡಿಸುತ ಪರಿಪರಿ ವಿಧದಲಿ ರಾಗವ ನುಡಿಸುತ' ಬೃಂದಾವನದಲ್ಲಿ ಆನಂದಕೇಳೀ ನಿರತನಾಗಿದ್ದುದನ್ನು ಕಣ್ಣಾರೆ ಕಂಡಿದ್ದಾರೆ. ಕಂಡಂತೆ ಹಾಡಿದ್ದಾರೆ. ದೇವ ಲೋಕವೂ ಈ ದಿವ್ಯ ಗಾನದಲ್ಲಿ ಪಾಲ್ಗೊಂಡಿತು. ಸುರರು ಅಂಬರದಿ ಸಂದಣಿಸಿರೆ, ಅಪ್ಸರ ಸ್ತ್ರೀಯರು ಮೈಮರೆದಿರೆ, ಹರಬ್ರಹ್ಮರು ನಲಿದಾಡುತಿರೆ, ತುಂಬುರು ನಾರದರು ಪಾಡುತಿರೆ' ಕೃಷ್ಣನ ಕೊಳಲಿನಗಾನ ದೇವಲೋಕವನ್ನು ತುಂಬಿತು. ಕನಕದಾಸರ ಹೃದಯಮನಗಳನ್ನು ತುಂಬಿತು. ಭಕ್ತರ ಜೀವನಗಳನ್ನು ಪಾವನಗೊಳಿಸಿತು.

ವಿಜಯದಾಸರು ಕಂಡ ವೇಣುಗೋಪಾಲನ ರೀತಿ ಈ ಪರಿಯ ಸೊಬಗಿನದು. 'ಬೆರಳ ಸಂದಿಲಿ ಮುರಳಿ ಪಿಡಿದು ಮುರಾರಿ ತಾನು ಹರುಷ ದಿಂದಲಿ ಸ್ವರವ ನುಡಿದು, ವಾರಿಜನೇತ್ರ ಅರಳು ಮಲ್ಲಿಗೆ ಸರಗಳ ಮುಡಿದು, ಕೂರಳ ಪದಕ ಹಾರ ಕೌಸ್ತುಭ ಶೋಭಿತ, ಮರುಳು ಮಾಡಿದ ಮಡದಿಯರೆಲ್ಲರ' ಶ್ರೀಕೃಷ್ಣನು ಕೊಳಲಿನಿಂದ ಹಾಡಿದ ರಾಗಗಳನ್ನು ವಿಜಯದಾಸರು ಕೇಳಿ ಆನಂದಿಸಿ ಹೀಗೆ ಹೇಳಿದ್ದಾರೆ. 'ಗೌರಿ, ಗಾಂಧಾರಿ, ಗೌಳಪಂತು, ಗೌರೀಶಭೂಷಣ, ಶಿರಿಸಾರಂಗ ಮೋಹನವಿಂತು ಸಾವೇರಿ ಸುರುಟಿ ಭೈರವಿ ಬ್ಯಾಗದೆ ಊದುತ ನಿಂತು ಮಾರಜನಕ ತಾನಾನಂದದಲಿ ವೀರ ಶ್ರೀಕೃಷ್ಣನು ವಿಧವಿಧ ರಾಗದಿ ಪಾಡಿದ.'

ಗೋಪಾಲದಾಸರು ಕೃಷ್ಣನ ಕೊಳಲಗಾನದ ಮಧುರ ಲಹರಿ ಅಲೆ ಅಲೆಯಾಗಿ ಎಲ್ಲೆಡೆ ಹರಡಿ ಪುರಕೃತಿಯ ಮೇಲೆ ಬೀರಿದ ಸುಪ್ರಭಾತವನ್ನು ಇಂತು ಅನನ್ಯನಾಗಿ ವರ್ಣಿಸಿದ್ದಾರೆ. ದೇವ ಕೊಳಲನೂದುವುದು ಕೇಳಿ ಗೋವ್ಯಾಘ್ರ ಏಕತ್ರ ಬೆರೆದು, ಕೇವಲ ವೈರತ್ವ ಮರೆತು ಮೇವು ಜರಿದು, ಕೃಷ್ಣನನ್ನು ನೋಡುತ್ತ, ಖಗಮೃಗ ಏಕೋಭಾವದಿಂದ ಗಾನನ ಕೇಳುತ್ತ ಚಿತ್ರದ ಬರೆದ ಭಾವದಂತೆ ಜಗಕೆ ತೋರುತ್ತ ಅಂದು ನಿಂತುದನ್ನು ನಾವಿಂದು ಕಾಣುವಂತೆ ಮಾಡಿದ್ದಾರೆ. ಗೋಪ ಗೋಪಿಯರು ಕೊಳಲ ಗಾನವ ಕಿವಿಯಲ್ಲಿ ಕೇಳುತ್ತ, ಗೋವಳನನ್ನು ಕಾಣುತ್ತ, ಭಾವದಿ ಬಿಗಿ ಬಿಗಿದಪ್ಪುತ್ತ,

ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
ಸಂಶೋಧನ ಕೇಂದ್ರ - ತಿರುಪತಿ

## ಒಂದು ವಿನಂತಿ

ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕ ಭಂಡಾರವಾಗಿ, ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶಹೊಂದಿದೆ. ಈಗ 40,000 ಕ್ಕಿಂತ ಹೆಚ್ಚು ಪುಸ್ತಕಗಳಿವೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ - ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ, ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -

ವಿಶೇಷಾಧಿಕಾರಿ,
ಶ್ರೀ ವೆಂಕಟೇಶ್ವರಕೇಂದ್ರ ಗ್ರಂಥಾಲಯ
ಹಾಗೂ
ಸಂಶೋಧನ ಕೇಂದ್ರ,
ತಿರುಪತಿ - 517 502.

ಮುದಪಟ್ಟರು. ಮಂಗಳ ಮೂರುತಿ ಪೊಂಗೊಳಲೂದುತ್ತ ತಿಂಗಳ ನಂದದಿ ಕಂಗಳು ಪೂಜೆಯ, ತುಂಗ ವಿಕ್ರಮ ಗೋಪಾಲವಿಠಲಗೆ ಮಂಗಳಾರತಿ ಎತ್ತಿ ಶೃಂಗಾರದಿ ನಲಿದರು.

ರಂಗ ಕೊಳಲನೂದಲಾಗಿ, ರಂಗಯ್ಯ ಕೊಳಲನೂದಲು ಮಂಗಳಮಯವಾಯಿತು ಧರೆಯು, ಜನಂಗಳು ಜೀವನ ಚೇತನ ಮರೆದು ರಂಗನ ಧ್ಯಾನಿಪರಾದರು. ಎಂದು ಪ್ರಸನ್ನ ವೆಂಕಟದಾಸರು ಪಿಳ್ಳಂಗೋವಿಯ ಚೆಲ್ವ ಕೃಷ್ಣನ ಕೊಳಲಗಾನವ ಪರಿಯನ್ನು ಹಾಡಾಗಿ ಹರಿಸಿದ್ದಾರೆ.

'ಮುರಳಿಯ ನಾದವ ಕೇಳಿ ಬನ್ನಿರಿ' ಎಂದು ಬಂದಾವನಕ್ಕೆ ನಮ್ಮನ್ನು ಆಹ್ವಾನಿಸುತ್ತಿದ್ದಾರೆ. ವಿದ್ಯಾಪ್ರಸನ್ನತೀರ್ಥರು. ಅಲ್ಲಿ 'ಶ್ಯಾಮಲಾಂಗನು ತನ್ನಕೋಮಲ ಕರದಲಿ ಆ ಮುರಳಿಯ ಪಿಡಿಯೆ ಹೃದಯದಲಿ ಪ್ರೇಮವು ತುಂಬುವುದು. ಸುರಿವುದಾನಂದ ಜಲ ನಯನದಲಿ. ಪಂಚಬಾಣನ ಪಿತ ಮುರಳಿಯ ಮಧುರಸ ಹಂಚಲೆಮಗೆ ರೋಮಾಂಚವಾಗುವುದು.' ಇಂತು ಪಂಚೇಂದ್ರಿಯಗಳಿಗೂ ರಸ ದೌತಣವಾಗಿ ಆತ್ಮವು ತೃಪ್ತವಾಗುವುದು.

ಮುರಳಿಯ ದನಿಯು ಕರೆಯುತಲಿರುವುದು ಪೋಗುವ ಬಾರೆ ಸಖಿ ಎಂಬ ಗೀತೆಯಲ್ಲಿ ಕೃಷ್ಣನ ಕರಕಮಲಗಳಲ್ಲಿ ನಲಿದಾಡುತ್ತಿರುವ ಕೊಳಲಿನ ಭಾಗ್ಯವನ್ನು ಬಣ್ಣಿಸುತ್ತಾರೆ. ಕ್ಷೀರ ಶರಧಿ ತನಯಳ ವೈಭವ ಈ ನೀರಸಳಿಗೆ, ಇದು ಅಚ್ಚರಿಯು. ಕೋರಿ ಚುಂಬಿಸುವ ಕೃಷ್ಣನಧರಸುಧೆ ಧಾರೆಯನ್ನು ಸೂರೆಗೊಳ್ಳುತ್ತದೆ. ಮಾಧವನು ಮುರಳಿಯ ನೂದಲು ಅದನ್ನು ಕೇಳಿ, ''ಭವದ ಸಂತಾಪವು ಕೊನೆಗಾಣಲಿ ಭುವಿಯೊಳು ಜೀವನ ಸವಿಯಾಗಲಿ, ನವವಿಧ ಭಕುತಿಯು ಹರಿದಾಡಲಿ, ಅರಿಷಡ್ವರ್ಗಗಳೆಲ್ಲ ಮರೆಯಾಗಲಿ. ಹರುಷ ಮಾನಸದಲಿ ಸೆರೆಯಾಗಲಿ, ಪರಮ ವೈರಾಗ್ಯವೆ ಸಿರಿಯಾಗಲಿ, ಈ ಗಾನವ ಸವಿಯಲು ನರಜನ್ಮವಿರಲಿ ಎಂದೆಂದಿಗೂ' ಎಂದು ಭಕ್ತನ ಹೃದಯದಲ್ಲಿ ಪುಟಿಪುಟಿದೇಳುವ ಭಾವನೆಗಳಿಗೆ ಮಾತು ನೀಡಿದ್ದಾರೆ. ಮತ್ತೊಂದು ಗೀತೆಯಲ್ಲಿ ಮುರಲೀಧರ ಶ್ರೀಕೃಷ್ಣನ ನೋಡಲು ಏನೋ ಸಂತೋಷ. ಏನೋ ವಿನೋದ. ಎಂದು ಹಾಡಿದ್ದಾರೆ. ಗೋವಿಂದನ ಮೈ ಸೊಬಗನ್ನು ನೋಡಲು ಯಮುನೆ ಮೆಲ್ಲನೆ ಹರಿವಳು. ರಂಗನ ವದನ ಶಶಾಂಕವ ನೋಡಿ ಶೃಂಗಾರ ಶರಧಿ ತರಂಗಗಳೆದ್ದವು. ಮುರಳಿಯ ನಾದದ ಪ್ರವಾಹ ಭುವನವ ತುಂಬಿತು, ಗಗನವ ತುಂಬಿತು. ದಿವಿಜರ ಲೋಕಗಳೆಲ್ಲವ ತುಂಬಿತು. ಈ ಮುರಳೀನಾದ ವೈಭವವನ್ನು ವರ್ಣಿಸಲಾರದೆ ಕವಿಗಳು ಸೋತರು. ನರ ಲೋಕದ ಮಂದಿಗಳು ಕರೆದರು ಮೋದದ ಕಂಬನಿಯ. ಅರಿತರು ಮೋಕ್ಷದ ಸುಖವೆಂಬುದ. ದೇವಲೋಕವನ್ನೂ ಈ ಸಡಗರ ತುಂಬಿತು. 'ಈಶನು ಕೈಲಾಸದಲ್ಲಿ ಕುಣಿದನು. ಶೇಷನು ಸಾಸಿರಫಣೆಗಳನ್ನಾಡಿದ. ದೋಷರಹಿತ ವಾಣೀಶನ ವದನ ವಿಕಾಸವು ಬೆಳಗಿತು ನಾಲ್ಕು ದಿಕ್ಕುಗಳ.' ಕಡೆಯಲ್ಲಿ ಈ ಸುಂದರ ಸಮಯವನ್ನು 'ಇತಿಹಾಸಗಳಲ್ಲಿ ಕವಿ ' ವ್ಯಾಸರಿಗಲ್ಲದೆ ವರ್ಣಿಸಲಳವೆ ಎಂದು ಉದ್ಗರಿಸುತ್ತಾ ವೇಣುವಾದನ ವೈಭವವನ್ನು ಬಣ್ಣಿಸಲು ತಮಗೆ ಶಕ್ತಿ ಸಾಲದೆಂದೇ ಹೇಳುತ್ತಾರೆ. ವಿದ್ಯಾಪ್ರಸನ್ನ ತೀರ್ಥರ ಈ ಸವಿನುಡಿಗಳಿಂದ ಗಾನಲೋಲ ಶ್ರೀಕೃಷ್ಣನು ಪ್ರಸನ್ನನಾಗುವುದರಲ್ಲಿ ಸಂಶಯವಿಲ್ಲ.

ಹೀಗೆ ಹರಿದಾಸರ ಈ ವೇಣುಗೀತಗಳಲ್ಲಿ ಕೃಷ್ಣನ ಮಧುರ ಮುರಲೀಗಾನ, ಅದರಿಂದ ಪ್ರಕೃತಿಯ ಪರವಶತೆ ಹಾಗೂ ಗೋಪಿಯರು ಈ ಗಾನದಿಂದ ಆಕರ್ಷಿತರಾದ ರೀತಿ - ಇವೆಲ್ಲವೂ ನೈಜತೆ. ಮಧುರ ಸಮ್ಮಿಲನದಿಂದ ಚಿತ್ರಿಸಲ್ಪಟ್ಟು, ಈ ಗೀತೆಗಳು ಹರಿದಾಸ ಸಾಹಿತ್ಯದಲ್ಲಿ ತಮ್ಮದೇ ಆದ ಒಂದು ವಿಶಿಷ್ಟಸ್ಥಾನವನ್ನು ಗಳಿಸಿವೆ. ಒಂದೊಂದು ಗೀತೆಯೂ ಬೃಂದಾವನದ ಸುಂದರ ಚಿತ್ರಗಳನ್ನು ನೀಡುತ್ತಾ 'ಮುರಳೀ ನಾದವ ಕೇಳಿ ಬನ್ನಿರಿ' ಎಂದು ಕರೆಯುತ್ತಲೇ ಇರುತ್ತವೆ.



# ಸನಾತನ ಧರ್ಮದಲ್ಲಿ ತೀರ್ಥದ ಮಹಿಮೆ

- ವಿದ್ವಾನ್ ಕಸ್ತೂರಿ ರಂಗರಾಜನ್.

ತೀರ್ಥಶಬ್ದವು ವ್ಯಾಪಕವೂ ವಿಶಿಷ್ಟವೂ ಆದ ಅರ್ಥವನ್ನೊಳಗೊಂಡಿದೆ. ವ್ಯಾಕರಣ ಶಾಸ್ತ್ರದ ವ್ಯುತ್ಪತ್ತಿಯಂತೆ ''ತೃ'' ಧಾತುವಿಗೆ ''ಥ'' ಪ್ರತ್ಯಯವು ಸೇರಿ ತೀರ್ಥ ಶಬ್ದವಾಗಿದೆ. ಇದರ ಶಾಬ್ದಿಕ ಅರ್ಥದಂತೆ ''ಯಾವುದರ ಮೂಲಕ ವಿಮುಕ್ತಿ ಗೊಳ್ಳುವುದೋ ಅದು - ಪಾರಾಗುವುದೋ ಅದು'' ಎಂಬುದಾಗಿದೆ. ಅರ್ಥಾತ್ ಯಾವುದರಿಂದ ಅತ್ಯಂತ ಕ್ಲೇಶದಾಯಕವಾದ ಸಂಸಾರಬಂಧದಿಂದ ವಿಮುಕ್ತಿಗೊಳ್ಳುವುದೋ ಅದೇ ತೀರ್ಥ ವಾಗುವುದು. ಜನ್ಮಕೊಟ್ಟು, ಧರ್ಮಪ್ರಜೆಯನ್ನಾಗಿಸುವ ತಂದೆಯನ್ನು ಲೋಕದಲ್ಲಿ ''ತೀರ್ಥರೂಪು'' (ಪರಮ ಪೂಜನೀಯರು) ಎಂದು ಪ್ರಯೋಗಿಸುವ ಆಚರಣೆಯು ಇಂದಿಗೂ ನಡೆದು ಬರುತ್ತಿದೆ. ಒಂದು ವೇಳೆ ವಯಸ್ಸಿನಲ್ಲಿ ತಾರತಮ್ಯವಿದ್ದರೂ ಜ್ಞಾನ ಸಂಪಾದನೆಯಲ್ಲಿ ಸಮಾನರಾದ ವಿದ್ವಾಂಸರುಗಳೀರ್ವರನ್ನು ಸಂಬೋಧಿಸುವಾಗ ''ಸತೀರ್ಥರು'' ಎಂದು ಹೆಸರಿಸುವ ಸಂಪ್ರದಾಯವಿದೆ. ದೇವಾಲಯಗಳಲ್ಲಿ ಕೊಡುವ ದೇವರ ಅಭಿಷೇಕದ ನೀರನ್ನು ''ದೇವರತೀರ್ಥ'' ವೆಂದೇ ಸ್ವೀಕರಿಸುವ ಪದ್ಧತಿ ಇದೆ. ದೇವರ ತೀರ್ಥಕ್ಕೆ ತನ್ನದೇ ಆದ ಮಹತ್ವವಿದೆ.

ಅಕಾಲಮೃತ್ಯು ಹರಣಂ
ಸರ್ವವ್ಯಾಧಿನಿವಾರಣಂ।
ಸಮಸ್ತದುರಿತೋಪಶಮನಂ
ಶ್ರೀ ವಿಷ್ಣುಪಾದೋದಕಂ ಪಾವನಂ ॥

ಭಗವಂತನ ಪಾದೋದಕವು ಅಕಾಲಮೃತ್ಯು ಹರಣವೂ, ಸರ್ವವ್ಯಾಧಿ ನಿವಾರಣವೂ, ಸಮಸ್ತ ದುರಿತ ಉಪಶಮನವೂ (ಸಂಚಿತಪಾಪ ನಿವಾರಣ) ಪಾವನವೂ ಆದುದಾಗಿದೆ. ಆದ್ದರಿಂದ ದೇವರ ತೀರ್ಥವನ್ನು ನಾವು ಪ್ರಾಶನ ಮಾಡುವಾಗ ಮೇಲಿನ ಮಂತ್ರವನ್ನು ಹೇಳಿ ಪ್ರಾಶಿಸುವುದು ಅವಶ್ಯಕ.

ಜೈನ ಧರ್ಮದ ಪ್ರವರ್ತಕರುಗಳಾದಿ ಮಹಾವೀರಾದಿ ಇಪ್ಪತ್ನಾಲ್ಕು ಆಚಾರ್ಯರುಗಳನ್ನು ''ತೀರ್ಥಂಕರ'' ರೆಂದೇ ಉಲ್ಲೇಖಿಸುವ ಪರಿಪಾಠವಿದೆ. ನಾವು ಯಾವುದೇ ರೀತಿಯ ನೀರನ್ನು ಯಾವುದೇ ಸ್ಥಳದಲ್ಲಿ ಕುಡಿಯುವುದರಿಂದ ಅದು ಅಮೃತತ್ವವನ್ನು ಪಡೆಯುವುದರಿಂದಲೇ ಜೀವ ಉಳಿಯಲು ಸಾಧ್ಯವಾಗಿದೆ. ಆದಕಾರಣ ನಾವು ಕುಡಿಯುವ ನೀರನ್ನು ತೀರ್ಥವೆಂದು ಸ್ವೀಕರಿಸುವುದರಿಂದ ಆ ನೀರಿನಲ್ಲಿ ಅನೇಕ ಪುಣ್ಯನದಿಗಳ ತೀರ್ಥವು ಸಾನ್ನಿಧ್ಯ ಪಡೆದು ನಮ್ಮ ಜೀವ ಉಳಿಸುವ ದಿವ್ಯಶಕ್ತಿಯು ಅದರಲ್ಲಿ ಏರ್ಪಡುವುದು.

ಹಲವು ಸಾಂಪ್ರದಾಯಿಕ ಮಠಾಧಿಪತಿಗಳು ತಮ್ಮ ಪೀಠದ ಪರಮಪೂಜ್ಯತೆಯನ್ನು ಎತ್ತಿ ಹಿಡಿಯಲು ಮತ್ತು ಆಸ್ತಿಕ ಜನತೆಗೆ ತಿಳಿಯಪಡಿಸಲೋಸುಗ ಯತಿವರ್ಯರು ತಮ್ಮ ನಾಮಾಂಕಿತದಲ್ಲಿ ವಿದ್ಯಾತೀರ್ಥರು, ಆನಂದ ತೀರ್ಥರು, ಭಾರತೀತೀರ್ಥರು ಇವೇ ಮುಂತಾಗಿ ಸೇರಿಸಿಕೊಳ್ಳುವ ಪರಿಪಾಠವು ಆರ್ಷೇಯವಾಗಿ ನಡೆದುಬಂದಿದೆ. ಮೈಸೂರು ಅರಸರಲ್ಲಿ ಮೂರ್ಧನ್ಯರಾದ, ರಾಜಋಷಿ ಎಂದು ಪ್ರಸಿದ್ಧಿಪಡೆದ ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಪದ್ಧತಿಯಂತೆ ದಿನಂಪ್ರತಿ ಸಂದರ್ಶಿಸುತ್ತಿದ್ದ ಕೋಟೆಯ ವೆಂಕಟ ರಮಣನ ಸನ್ನಿಧಿಗೆ ಹೋದಾಗ, ಹಲವು ರಾಜ ಪರಿವಾರದವರ, ಕುತಂತ್ರ ಪೂರಿತ ವಿರೋಧಿ ಜನಗಳ ದುರ್ಮಂತ್ರಾಲೋಚನೆಯ ಮೇರೆಗೆ ದೇವರ ತೀರ್ಥದಲ್ಲಿ ಕಠೋರವಾದ ವಿಷ ಬೆರೆಸಿದ ತೀರ್ಥವನ್ನು ಅರ್ಚಕರ ಮೂಲಕ ಕೊಡಿಸಲು ಏರ್ಪಡಿಸಿದರು. ಭಯದ ಮುಖದೊಂದಿಗೆ ನಡುಗುತ್ತಿರುವ ತಮ್ಮ ಕೈಯಿಂದ ಆಲಯದ ಅರ್ಚಕರು ರಾಜರಿಗೆ ತೀರ್ಥವನ್ನು ಕೊಟ್ಟ ಸಂದರ್ಭದಲ್ಲಿ ಅರ್ಚಕರ ಅಂದಿನ ಪರಿಸ್ಥಿತಿಯನ್ನು ಕಂಡ ದೊರೆಗಳು, ಪ್ರಶ್ನಿಸಲಾಗಿ, ಅರ್ಚಕರು ಅದರಲ್ಲಿ ತಾನು ವಿಷಬೆರೆಸಿರುವ ಘೋರಅಪರಾಧವನ್ನು ಒಪ್ಪಿ ರಾಜರ ಕಾಲಿಗೆ ಬಿದ್ದು ತಮ್ಮ ತಪ್ಪನ್ನು ಮನ್ನಿಸಲು ಬೇಡಿದರು ಹಾಗೂ ಆ ವಿಷದ ನೀರನ್ನು ಕುಡಿಯ ಕೂಡದೆಂದು ಬಿನ್ನವಿಸಿದರು. ಆಗ, ದೊರೆಗಳು ಅರ್ಚಕರಲ್ಲಿ, ನೀವು ನನಗೆ ಕೊಟ್ಟಿರುವ ನೀರನ್ನು ದೇವರ ತೀರ್ಥವೆಂದು ಕೊಟ್ಟಿರುವಿರೋ ಅಥವಾ ವಿಷದ ನೀರೆಂದು ಕೊಟ್ಟಿರುವಿರೋ ಎಂದು ಮತ್ತೊಮ್ಮೆ ಪ್ರಶ್ನಿಸಲಾಗಿ, ಅರ್ಚಕರು ತಾನು ದೇವರ ಅಭಿಷೇಕದ ತೀರ್ಥಕ್ಕೆ ವಿಷಬೆರೆಸಿದ್ದುದಾಗಿಯೂ ತಾನು ಅದನ್ನು ದೇವರ ತೀರ್ಥವೆಂದೇ ಕೊಟ್ಟೆನೆಂದು ಖಾತ್ರಿಪಡಿಸಿದಾಗ ''ಯದ್ಭಾವಂ ತದ್ಭವತಿ'' ಎಂಬಂತೆ ದೊರೆಗಳು ಸ್ವಲ್ಪವೂ ವಿಚಲಿತರಾಗದೇ ಕೂಡಲೇ ಆ ತೀರ್ಥವನ್ನು ಸ್ವೀಕರಿಸಿಯೇ ಬಿಟ್ಟರು. ಪವಾಡವೋ ಎಂಬಂತೆ, ತೀರ್ಥವು ಮಾತ್ರ ಅವರ ದೇಹಕ್ಕೆ ಸೇರಿ ವಿಷವೆಲ್ಲವೂ ಕೈಯಲ್ಲಿಯೇ ನಿಂತು, ವಿಷದಕಾರಣ ದೊರೆಗಳ ಅಂಗೈಭಾಗವು ಪೂರ್ಣವಾಗಿ ಬೆಂದುಹೋಗಿದ್ದಿತು. ಮಹಾರಾಜರ ಜೀವ ಉಳಿಸಿದ ದೇವರ ತೀರ್ಥದ ಮಹಿಮೆಯನ್ನು ಕಂಡು ದಿಗ್ಭ್ರಮೆಗೊಂಡ ಜನರು ಅಂದಿನಿಂದ ಆ ದೇವರಿಗೆ ವೈದ್ಯ ವೆಂಕಟರಮಣನೆಂದೇ ಹೆಸರಿಸಿದರು. ಈ ರೀತಿಯಾಗಿ ಮೈಸೂರು ಅರಸರ ಚರಿತ್ರೆ ಭಾಗ 2 ರಲ್ಲಿ ಉಲ್ಲೇಖವಿದೆ.

ಪ್ರಾಣಪ್ರಯಾಣ ಸಮಯದಲ್ಲಿ ಜೀವಿಯ ಶರೀರ ಶುದ್ಧಿಯೊಂದಿಗೆ ಸಂಚಿತಪಾಪ ನಿವಾರಣೆಯ ಮೂಲಕ ಸ್ವರ್ಗವಾಸ ಹೊಂದಲೆಂದು ಗಂಗಾತೀರ್ಥವನ್ನು ಅವರ ಬಾಯಿಗೆ ಬಿಡುವ ಪದ್ಧತಿ ಇಂದಿಗೂ ನಡೆದು ಬರುತ್ತಿದೆ.

''ತರತಿ ಪಾಪಾದಿಕಂ ಯಸ್ಮಾತ್'' ಯಾವುದರ ಮೂಲಕ ಚೇತನರು ಸಕಲ ಪಾಪಗಳಿಂದ ವಿಮುಕ್ತರಾಗುವರೋ ಅದನ್ನು ತೀರ್ಥವೆನ್ನುವರು. ಇಂತಹ ತೀರ್ಥವು ಹಲವಾರು ಬಗೆಯಿದ್ದರೂ ಪ್ರಧಾನವಾಗಿ **ಮೂರು** ಪ್ರಕಾರವಾಗಿ ಹೇಳಲಾಗಿದೆ. ಇವೇ ಜಂಗಮ, ಮಾನಸ ಮತ್ತು ಭೌಮ ಎಂದು.

ಯಾರಮೂಲಕ ಉಚ್ಚರಿಸಲ್ಪಟ್ಟ ವೇದವಾಣಿಯನ್ನು ಕೇಳುವುದರಿಂದ ಮನುಷ್ಯನು ಪಾಪಮುಕ್ತನಾಗಿ ಸಮಸ್ತ ಅಭಿಲಾಷೆಗಳನ್ನು ಪೂರೈಸಿಕೊಳ್ಳುವನೋ ಅಂತಹ ಸದಾಚಾರ ಸಂಪನ್ನನಾದ ವೇದಜ್ಞಾನಿ ಬ್ರಾಹ್ಮಣರನ್ನು ಜಂಗಮ ತೀರ್ಥವೆನ್ನುವರು.

ಸತ್ಯ, ತಪಸ್ಸು, ಕ್ಷಮಾ, ಧರ್ಮ, ದಯಾ, ದಮ, ದಾನ, ಧೈರ್ಯ, ಜ್ಞಾನ, ಸಂತೋಷ ಮತ್ತು ಚಿತ್ತಶುದ್ಧಿ ಇವುಗಳನ್ನು ಮಾನಸ ತೀರ್ಥವೆಂದು ಹೆಸರಿಸಲಾಗಿದೆ.

ಅಯೋಧ್ಯಾ ಮಥುರಾ
ಮಾಯಾ ಕಾಶೀ ಕಾಂಚೀ ಹ್ಯವಂತಿಕಾ
ಪುರೀ ದ್ವಾರಾವತೀಚೈವಾ
ಸಪ್ತೈತಾ ಮೋಕ್ಷದಾಯಿಕಾಃ

ಅಯೋಧ್ಯಾ, ಮಥುರಾ, ಮಾಯಾ (ಹರಿದ್ವಾರ) ಕಾಶೀ, ಕಾಂಚೀ, ಅವಂತಿಕಾ, ಮತ್ತು ದ್ವಾರಕಾದಿ ಸಪ್ತ ಪುರಿಗಳನ್ನೂ ಮತ್ತು ಪುಷ್ಕರಾದಿ ತೀರ್ಥಸ್ಥಳವನ್ನೂ ಭೌಮ ತೀರ್ಥವೆಂದು ಪರಿಗಣಿಸಲಾಗಿದೆ.

ಈ ಮೇಲಿನ ತೀರ್ಥಗಳ ಮೂರು ವಿಭಾಗದಲ್ಲಿಯೇ, ಕರ್ಮಭೂಮಿಯೂ, ಜ್ಞಾನಭೂಮಿಯೂ ಆದ ಭರತಖಂಡದಲ್ಲಿ ವ್ಯಾಪಿಸಿರುವ ಸಮಸ್ತ ನದಿಗಳ ಮತ್ತು ಮನುಷ್ಯನ ಸಜ್ಜನಿಕೆ, ಸನ್ನಡತೆಯ ಸಾಕಾರವು ಅಡಕಗೊಂಡಿದೆ. ಈ ತೀರ್ಥಗಳು ಸ್ಥಾನ ಭೇದದ ಕಾರಣ ತೀರ್ಥ ವಿಶೇಷತೆಯ ಪ್ರಾಧಾನ್ಯ ಹಾಗೂ ಮಾನ್ಯತೆಯೊಂದಿಗೆ ತಮ್ಮದೇ ಆದ ವೈಶಿಷ್ಟ್ಯಗಳನ್ನು ಪಡೆದಿವೆ.

ಯಾವ ರೀತಿಯಲ್ಲಿ ಶರೀರದ ಅಂಗಗಳಲ್ಲಿ ಶಿರ, ಅಕ್ಷಿ, ಕರ್ಣ, ಜಿಹ್ವೆ ಮುಂತಾದ ಕೆಲವು ಅಂಗಗಳು ಪವಿತ್ರವೆಂದು ಪರಿಗಣಿಸಲ್ಪಟ್ಟಿದೆಯೋ ಅಂತೆಯೇ ಭೂಮಂಡಲದಲ್ಲಿ ಕೆಲವು ಕ್ಷೇತ್ರಗಳು ವಿಶೇಷತೆಯನ್ನೂ ಪವಿತ್ರತೆಯನ್ನೂ ಪಡೆದಿದೆ. ಕೆಲವು ಭೂಭಾಗದಲ್ಲಿ ಅದ್ಭುತ ಪ್ರಭಾವದ ಕಾರಣ, ಕೆಲವೆಡೆ ಗಂಗಾದಿ ನದಿಗಳ ಸಾನ್ನಿಧ್ಯದ ಕಾರಣ, ಮತ್ತೆ ಕೆಲವೆಡೆ ಋಷಿಗಳ, ಮುನಿಗಳ, ಸಾಧುಸಂತರ, ಮಹಾತ್ಮರ ತಪೋ ಭೂಮಿಯಾಗಿ, ಮಗದೊಂದೆಡೆ ಭಗವಂತನ ಅವತಾರ ಮತ್ತು ಲೀಲಾ ಭೂಮಿಯಾದ ಕಾರಣ ಭೌಮ ತೀರ್ಥಗಳು ಅತ್ಯಂತ ಪುಣ್ಯಪ್ರದವೆಂದು ಮಾನ್ಯತೆ ಪಡೆದಿವೆ. ಈ ಏಳು ಪಟ್ಟಣಗಳು ಮುಕ್ತಿಯನ್ನು ಪ್ರದಾನ ಮಾಡುವ ಶಕ್ತಿಯನ್ನು ಪಡೆದು ಭಗವತ್ ಸ್ವರೂಪ ರೂಪವಾಗಿರುವ ಕಾರಣವಾದ್ದರಿಂದ ದಿನಂಪ್ರತಿ ಪ್ರಾತಃ ಸ್ಮರಣೆಯಲ್ಲಿ ಈ ಸಪ್ತಪುರಿಗಳನ್ನು ನೆನೆದರೆ, ಪಠಿಸಿದರೆ ವಾಂಛಿತ ಫಲವೂ ಆಮುಷ್ಮಿಕ ಸುಖವೂ ಲಭಿಸುವುದು ಎಂಬುದು ಸನಾತನ ಧರ್ಮೀಯರ ಅಚಲ ನಂಬಿಕೆಯಾಗಿ ಇಂದಿಗೂ ಉಳಿದಿದೆ. ಯಾವ ರೀತಿಯಲ್ಲಿ, ಮರ್ಯಾದಾ ಪುರುಷೋತ್ತಮನಾದ ಭಗವಾನ್ ಶ್ರೀರಾಮಚಂದ್ರನ ಜನ್ಮಭೂಮಿ ಹಾಗೂ ಲೀಲಾಭೂಮಿಯಾದ ಕಾರಣ ಅಯೋಧ್ಯೆಯ ಪಾವನತೆಯೂ, ಭಗವಾನ್ ಶ್ರೀಕೃಷ್ಣನ ಜನ್ಮಭೂಮಿಯೂ, ಲೀಲಾಭೂಮಿಯೂ ಆದಕಾರಣ ಮಥುರಾಬೃಂದಾವನಗಳ ಪಾವಿತ್ರ್ಯವೂ ಗಂಗೆಯು ಬೆಟ್ಟದಿಂದಿಳಿದು ಬಯಲಿಗೆ ಬಂದ ಸ್ಥಳವಾದ ಹರಿದ್ವಾರ (ಮಾಯಾ) ಶ್ರೇಷ್ಠತೆಯೂ ಭಗವಂತ ವಿಶ್ವನಾಥನ ಸಾನ್ನಿಧ್ಯದ ಕಾರಣ ಕಾಶೀನಗರಿಯ ವಿಶೇಷತೆಯೂ, ಪರಮಶಿವ ಮತ್ತು ವಿಷ್ಣುವಿನ ಸಾನ್ನಿಧ್ಯದ ಕಾರಣ ಕಾಂಚೀನಗರಿಯ ವೈಶಿಷ್ಟ್ಯವೂ, ಭಗವಾನ್ ಮಹಾಕಾಲನ ಸನ್ನಿಧಿಯಕಾರಣ ಅವಂತೀಪುರದ ಪೂಜ್ಯತೆಯೂ, ಭಗವಾನ್ ದ್ವಾರಕಾನಾಥನ ಸಾನ್ನಿಧ್ಯದ ಕಾರಣದಿಂದಾಗಿ ದ್ವಾರಕೆಯ ಹಿರಿಮೆಯೂ ಅತ್ಯಂತ ಪ್ರಸಿದ್ಧವಾಗಿವೆ. ಇವೇ ಅಲ್ಲದೇ, ಭಾರತದಾದ್ಯಂತ ಇದರಂತೆಯೇ ಪವಿತ್ರಸ್ಥಳಗಳು ಎಣಿಕೆಗೆ ಸಿಗದಷ್ಟು ಇವೆ. ಒಂದೊಂದು ಗ್ರಾಮವೂ, ಒಂದೊಂದು ಪಟ್ಟಣವೂ ನದಿಗಳೂ, ಕೊಳಗಳೂ, ಕಾಡುಗಳೂ, ಶಿಖರಗಳೂ, ಗಿಡಮರಗಳೂ, ತಮ್ಮದೇ ಆದ ಅನಿತರಸಾಧಾರಣವಾದ ವಿಶೇಷತೆಯನ್ನು ಪಡೆದಿರುವುದರಿಂದಲೇ ''ಆರ್ಯಾವರ್ತಃ ಪುಣ್ಯಭೂಮಿಃ'' ಎಂದು ಭಾರತವನ್ನು ಭೂಲೋಕದಲ್ಲಿಯೇ ಪುಣ್ಯಭೂಮಿ ಎಂದು ಹೆಸರಿಸಲಾಗಿದೆ.

ಚೇತನರ ಪುಣ್ಯ ಪಾಪಗಳ, ಜನ್ಮಾನುಜನ್ಮದಿಂದ ಕೂಡಿದ ಪಾಪಶೇಷಗಳಿಗೆ ಕಡಿವಾಣ ಹಾಕಿ, ಎಚ್ಚರಿಸಿ ಅವರ ಮನಸ್ಸನ್ನು ದೇವರೆಡೆಗೆ ಪರಿವರ್ತಿಸುವ ದೈತ್ಯಕುಲ ಗುರುವಾದ ಶುಕ್ರಾಚಾರ್ಯದ ನೇತೃತ್ವದಲ್ಲಿ, ತಾನು ಅಜೇಯತೆಯನ್ನು ಪಡೆಯಲು ನಡೆಸಿದ ಸರ್ವ ವಿಜಯ ಮತ್ತು ಶತ್ರುಪರಾಜಯ ಮಹಾ ಯಜ್ಞದ ಸಾಫಲ್ಯತೆಗಾಗಿ ದಾನ ಪಡೆಯಲು ಅರ್ಹರಾದ ಋಷಿಗಳು, ಮುನಿಗಳು ಸಾಧುಸಂತರಿಗೆ ಕೇಳಿದ್ದನ್ನು ದಾನ ಮಾಡುತ್ತಿದ್ದ ಸಂದರ್ಭದಲ್ಲಿ ವಾಮನ ರೂಪನಾದ ಬ್ರಾಹ್ಮಣವೇಷಧಾರಿಯಾದ ಮಹಾವಿಷ್ಣುವು ಹೆಜ್ಜೆಯಷ್ಟು ನೆಲವನ್ನು ದಾನವಾಗಿ ಕೇಳಲಾಗಿ, ಬಲಿಯು ತನ್ನ ಪಟ್ಟ ಮಹಿಷಿಯೊಂದಿಗೆ ವಿಧಿವತ್ತಾಗಿ ವಿಷ್ಣುವಿಗೆ ಧಾರೆಯೆರೆದನು. ವಾಮನ ರೂಪಿಯಾದ ಮಹಾವಿಷ್ಣುವು ತ್ರಿವಿಕ್ರಮನಾಗಿ ಬೆಳೆದು ಭೂಲೋಕವೆಲ್ಲವನ್ನೂ ತನ್ನ ಒಂದು ಪಾದದಿಂದಲೂ, ಮತ್ತೊಂದು ಪಾದದಿಂದ - ಬ್ರಹ್ಮಾದಿ ಸಪ್ತಲೋಕವೆಲ್ಲವನ್ನೂ ಮಗದೊಂದು ಪಾದವನ್ನು ಬಲಿಗೆ ಚಿರಂಜೀವಿ ಪದವಿತ್ತು - ಆತನ ಶಿರಸ್ಸಿನ ಮೇಲೆ ಇಟ್ಟು ಅವನನ್ನು ಸರ್ವಪಾವನ ಗೊಳಿಸಿ, ಅತಳ ವಿತಳ ಪಾತಾಳಾದಿ ಲೋಕಕ್ಕೆ ತುಳಿದು ಆ ಲೋಕಗಳಿಗೆ ಚಕ್ರವರ್ತಿಯನ್ನಾಗಿಸಿದನು. ಮಹಾವಿಷ್ಣುವಿನ ಎರಡನೇ ಪಾದವು ಬ್ರಹ್ಮಲೋಕಕ್ಕೆ (ಸತ್ಯಲೋಕಕ್ಕೆ) ಮುಂದುವರೆದಾಗ ಸೃಷ್ಟಿಕರ್ತ ಬ್ರಹ್ಮದೇವರು ತನ್ನ ಕಮಂಡಲುವಿನ ತೀರ್ಥದಿಂದ ಅಭಿಷೇಕಮಾಡಿ ತನ್ನ ಕಮಂಡಲುವಿನಲ್ಲಿ ಸೇರಿಸಿಟ್ಟುಕೊಂಡನು. ಆ ದಿವ್ಯ ತೀರ್ಥವೇ ಗಂಗಾತೀರ್ಥವಾಯಿತು. ಮಹಾರಾಜ ಬಲಿಯ ಮರಿಮಗನಾದ ರಾಜಋಷಿ ಭಗೀರಥನ ಪ್ರಾರ್ಥನೆಯ ಮೇರೆಗೆ ಭೂಲೋಕಕ್ಕೆ ಬರಲಾದ ಗಂಗಾ ತೀಥವನ್ನು ಪರಶಿವನು ತನ್ನ ಶಿರಸ್ಸಿನಲ್ಲಿ ಧರಿಸಿ ಬಂಧಿಸಿಟ್ಟನು.

ಅಂದಿನಿಂದ ಪರಶಿವನು ಗಂಗಾಧರನಾದನು ಶಿವನ ಶಿರಸ್ಸಿನಿಂದ ಹೊರಬಂದ ಅತ್ಯಂತ ಮಹಿಮೆಯನ್ನು ಪಡೆದ ಆ ಗಂಗಾತೀರ್ಥವೇ ಭೂಲೋಕವೆಲ್ಲವನ್ನೂ ಪಾವನಗೊಳಿಸಿತೆಂದು ಶಿವಪುರಾಣವು ತಿಳಿಸುತ್ತದೆ. ಸರ್ವ ತೀರ್ಥಮಯಳೂ, ಸಮಸ್ತ ತೀರ್ಥಗಳ ಮೂರ್ಧನ್ಯಳೂ ಆಗಿರುವುದರಿಂದಲೇ ನದಿಗಳಲ್ಲಿ ಗಂಗೆಗೆ ವಿಶೇಷ ಪ್ರಾಧಾನ್ಯತೆ ಇದೆ.

ಸಾಮಾನ್ಯವಾಗಿ ಲೋಕದಲ್ಲಿ (ಭರತ ಖಂಡದಲ್ಲಿ) ಎಷ್ಟು ತೀರ್ಥಗಳಿವೆಯೋ ಅವುಗಳೆಲ್ಲದರ ಸಾನ್ನಿಧ್ಯ ಪಡೆಯಲು, ತೀರ್ಥಸ್ಥಳ ಸಂದರ್ಶನ, ತೀರ್ಥಸ್ನಾನಾದಿಗಳಿಗೆ, ಬಡವರಿಗೆ, ನಿರ್ಧನರಿಗೆ, ಅಶಕ್ತರಿಗೆ ಸಾಧ್ಯವಿರುವುದಿಲ್ಲ. ಅಂತಹ ಸ್ತ್ರೀ ಪುರುಷರಿಗೂ ಅಂತಹ ಫಲವು ಎಟಕುವಂತಹ, ಅತಿಸುಲಭವಾದ ತೀರ್ಥವನ್ನು ಸ್ಕಂದಪುರಾಣದಲ್ಲಿ ವಿಶಿಷ್ಟವಾದ ಏಳು ತೀರ್ಥಗಳ ವರ್ಣನೆಯು ಸಿಗುವುದು.

ಸತ್ಯಂ ತೀರ್ಥಂ ಕ್ಷಮಾ ತೀರ್ಥಂ
ತೀರ್ಥಮಿಂದ್ರಿಯ ನಿಗ್ರಹಃ
ಸರ್ವಭೂತದಯಾತೀರ್ಥಂ
ತೀರ್ಥಂ ಚ ಪ್ರಿಯವಾದಿತಾ
ಜ್ಞಾನ ತೀರ್ಥಂ ತಪಃತೀರ್ಥಂ
ಕಥಿತಂ ತೀರ್ಥ ಸಪ್ತಕಮ್

ಸತ್ಯ, ಕ್ಷಮಾ, ಇಂದ್ರಿಯ ಸಂಯಮ, ದಯಾ, ಪ್ರಿಯವಚನ, ಜ್ಞಾನ ಮತ್ತು ತಪಸ್ಸು ಇವೇ ಏಳುತೀರ್ಥಗಳಾಗಿವೆ. ಇವನ್ನು ಮಾನಸತೀರ್ಥವೆನ್ನುವರು. ಇದರಿಂದ ಬಹಿರಂಗಶುದ್ಧಿಗಿಂತ ಅಂತರಂಗ ಶುದ್ಧಿಗೆ ಇವು ಅತ್ಯಂತ ಸಹಕಾರಿಯಾಗಿದೆ. ಆಚರಣೆಗೂ ಸಹ ಇವು ಸುಲಭೋಪಾಯವಾಗಿದೆ.

ಭಗವತ್ಪಾದ ಆದಿ ಶಂಕರರೂ ಸಹ ''ತೀರ್ಥಂ ಪರಂ ಕಿಂ ಸ್ವಮನೋವಿಶುದ್ಧಮ್'' ತನ್ನ ಮನದ ಶುದ್ಧಿಯೇ ಪರಮ ತೀರ್ಥವೆಂದಿರುವರು.

ಆತ್ಮಾನದೀ ಸಂಯಮ ಪುಣ್ಯತೀರ್ಥಂ
ಸತ್ಯೋದಕಾ ಶೀಲತಟಾ ದಯೋರ್ಮಿಃ
ತತ್ರಾವಗಾಹಂ ಕುರುಪಾಂಡುಪುತ್ರ
ನ ವಾರಿಣಾ ಶುದ್ಧ್ಯತಿ ಚಾಂತರಾತ್ಮಾ

ಭಗವಾನ್ ವೇದವ್ಯಾಸರು ಮಹಾ ಭಾರತದಲ್ಲಿ, ಆತ್ಮವೇನದಿ, ಅದರಲ್ಲಿ ಸಂಯಮವೇ ಪುಣ್ಯಮಯವಾದ ಘಟ್ಟ (ಮೆಟ್ಟಿಲು), ಸತ್ಯವೇ ಜಲ, ಶೀಲವೇ ದಡ ಮತ್ತು ದಯೆಯೇ ಅಲೆಗಳು. ಯುಧಿಷ್ಠಿರನೇ, ನೀನು ಬೇರೆ ತೀರ್ಥಗಳಲ್ಲಿ ಸಾನ್ನಿಧ್ಯಪಡೆಯುವುದರಿಂದ ಭೌತಿಕ ಶುದ್ಧಿ ಯೇರ್ಪಡುವುದೇ ಹೊರತು ಅಂತಃಕರಣ ಶುದ್ಧಿಗೆ ಮೇಲ್ಕಂಡವುಗಳಲ್ಲಿ ಶರಣುಹೋಗು ಎಂದು ನಿರ್ದೇಶಿಸಿದ್ದಾರೆ.

ಮೇಲ್ಕಂಡ ಎಲ್ಲಾ ಮಾರ್ಗಕ್ಕಿಂತಲೂ ಅತ್ಯಂತ ಸುಲಭವಾದ ಮಾರ್ಗವನ್ನು ಪದ್ಮಪುರಾಣ ಸ್ವರ್ಗಖಂಡ 50/16 ರಲ್ಲಿ ತಿಳಿಸಿದೆ.

ಜನ್ಮಾಂತರ ಸಹಸ್ರೇಷು
ತಪೋಜ್ಞಾನ ಸಮಾಧಿಭಿಃ
ನರಾಣಾಂ ಕ್ಷೀಣ ಪಾಪಾನಾಂ
ಕೃಷ್ಣೇ ಭಕ್ತಿಃ ಪ್ರಜಾಯತೇ
ತೀರ್ಥಾನಾಂ ಚ ಪರಂ ತೀರ್ಥಂ
ಕೃಷ್ಣನಾಮ ಮಹರ್ಷಯಃ
ತೀರ್ಥಂ ಕುರ್ವಂತಿ ಜಗತೀ
ಗೃಹೀತಂ ಕೃಷ್ಣನಾಮಯೈಃ

ಜನ್ಮಾಂತರಗಳಲ್ಲಿ ಮಾಡಿದ ಪಾಪರಾಶಿಗಳು ಕ್ಷಮಿಸಲು, ಮತ್ತು ತಪೋಜ್ಞಾನ ಸಮಾಧಿಗಳ ಅಧಿಕಾರಿಯಾಗಲು ತೀರ್ಥಗಳಲ್ಲಿಯೇ ಅತ್ಯಂತ ಶ್ರೇಷ್ಠವಾದ ತೀರ್ಥವೆನಿಸಿರುವ ಕೃಷ್ಣನಾಮ ಸಂಕೀರ್ತನವೆಂಬ ದಿವ್ಯ ತೀರ್ಥದಲ್ಲಿ ಶುದ್ಧ ಮನಸ್ಕನಾಗಿ ಮುಳುಗುವುದರಿಂದ - ಜಪಿಸುವುದರಿಂದ ಇಹಪರಗಳಲ್ಲಿ ಶಾಶ್ವತ ಸುಖವು ಲಭಿಸುವುದು ಎಂದು ಜಾಗ್ರತ ಚಾಟಿಯಿಂದ ಹೊಡೆದೆಬ್ಬಿಸಿದೆ.

ಸನಾತನ ಧರ್ಮದ ಉತ್ಥಾನಕ್ಕೆ ನಾಂದಿರೂಪವಾದ, ಸ್ವರೂಪವಾದ ವೇದಗಳಲ್ಲಿ ತೀರ್ಥದ ಮಹಿಮೆಯನ್ನು ನಿಖರವಾಗಿ, ನಿಯಮಬದ್ಧವಾಗಿ ಉಲ್ಲೇಖಿಸಿದೆ.

ಬ್ರಹ್ಮಜ್ಞಾನಿಗಳು ವಾಸಿಸುವ ಸ್ಥಳವೇ ದಿವ್ಯಕ್ಷೇತ್ರಗಳು. ಅಂತಹ ಕ್ಷೇತ್ರಗಳಲ್ಲಿ ವಾಸಿಸುವ ಸಾಧುಸಂತರ, ಬ್ರಹ್ಮಜ್ಞಾನಿಗಳ ಪಾದೋದಕವೇ ತೀರ್ಥವೆನಿಸುವುದೆಂದು ಈ ಕೆಳಕಂಡ ವೇದ ಮಂತ್ರದಿಂದ ವೇದ್ಯವಾಗುವುದು.

ಯದಗ್ನಿಗಂ ಪೂರ್ವಗಂ
ಹರತ್ಯಥಾಗ್ನಿ ಹೋತ್ರಮ್
ಭಾಗದೇಯೇನೈವೇನಂ
ಪ್ರಣಯತಿ ಆರ್ಷೇಯ ಉದ್ಧರೇತ್
ಬ್ರಾಹ್ಮಣೋ ವೈ ಸರ್ವಾ ದೇವತಾಃ
ಸರ್ವಾಭಿರೇವೈನಂ ದೇವತಾಭಿರುದ್ಧರತಿ.

ಚೇತನರು ತಾವು ಮಾಡಿದ ಯಾವುದೇ ರೀತಿಯ ಸಂಚಿತ ಮತ್ತು ಆರ್ಜಿತ ಪಾಪಾದಿಗಳನ್ನು ಕಳೆದು ಪರಿಶುದ್ಧರಾಗಲು, ಶರೀರದಿಂದ ನಡೆದಿರುವ ಜ್ಞಾತ ಅಜ್ಞಾತ ಪಾಪಪೂರಿತ ಕರ್ಮದಿಂದ ವಿಮೋಚನೆ ಪಡೆಯಲು ಯಾವುದೇ ರೀತಿಯ ಶುಭಕರ್ಮಗಳ ಸಾದ್ಗುಣ್ಯತೆಯನ್ನು ಪಡೆಯಲು, ಮೃತ, ಜಾತಾದಿ ಇತರ ಸೂತಕಾದಿಗಳನ್ನು ಕಳೆಯಲು, ನಮ್ಮ ಪರಿಸರದಲ್ಲಿ ಸಿಗುವ ನದಿ, ಕೊಳ ಬಾವಿ, (ಕೊಳಾಯಿ) ಮುಂತಾದವುಗಳ ನೀರನ್ನು ಮಂತ್ರಗಳ ಮೂಲಕ ತೀರ್ಥವನ್ನಾಗಿಸಿ ಅದರ ಪ್ರೋಕ್ಷಣೆ ಹಾಗೂ ಪ್ರಾಶನದಿಂದ ಮೇಲ್ಕಂಡ ಸಕಲ ರೀತಿಯ ದೋಷ ಪರಿಹಾರಕ್ಕೆ ಮಂತ್ರಪೂರಿತ ತೀರ್ಥವು ಅಮೃತಸಂಜೀವಿನಿ ಎಂದು ಈ ಕೆಳಕಂಡ ವೇದಮಂತ್ರವು ಘೋಷಿಸಿದೆ.

ಆಪೋವಾ ಇದಗಂ ಸರ್ವಂ
ವಿಶ್ವಾ ಭೂತಾನ್ಯಾಪಃ
ಪ್ರಾಣಾವಾ ಆಪಃ ಪಶವ ಆಪೋऽನ್ನ
ಮಾ ಪೋऽಮೃತ ಮಾಪ ಸ್ಸಂರಾಡಾಪೋ
ವಿರಾಡಾಪಸ್ಸ್ವರಾಡಾ ಪಶ್ಛನ್ದಾಗ್‌ಸ್ಯಾಪೋ
ಜ್ಯೋತೀಗ್‌ಷ್ಯಾಪೋ ಯಜೂಗ್‌ಷ್ಯಾಪ
ಸ್ಸತ್ಯಮಾಪ ಸರ್ವಾದೇವತಾ ಆಪೋ
ಭೂರ್ಭುವಸ್ಸುವರಾಪ ಓಮ್ ||
ಅಪ ಪ್ರಣಯತಿ ಶ್ರದ್ಧಾವಾ ಆಪಃ
ಶ್ರದ್ಧಾಮೇವಾರಭ್ಯ ಪ್ರಣೀಯ ಪ್ರಚರತಿ
ಅಪಃ ಪ್ರಣಯತಿ ವಜ್ರೋವಾ ಆಪಃ
ವಜ್ರಮೇವ ಭ್ರಾತೃವ್ಯೇಭ್ಯಃ ಪ್ರಹೃತ್ಯ
ಪ್ರಣೀಯ ಪ್ರಚರತಿ ಅಪಃ ಪ್ರಣಯತಿ
ಆಪೋವೈರಕ್ಷೋಘ್ನೀಃ
ರಕ್ಷಸಾಮಪಹತ್ಯೈ ಅಪಃ ಪ್ರಣಯತಿ
ಆಪೋವೈ ದೇವಾನಾಂ ಪ್ರಿಯಂ ಧಾಮ
ದೇವಾನಾಮೇವ ಪ್ರಿಯಂಧಾಮ

ಪ್ರಣೀಯ ಪ್ರಚರತಿ ಅಪಃ ಪ್ರಣಯತಿ
ಆ ಪೋವೈ ಸರ್ವಾದೇವತಾಃ

ದೇವತಾ ಏ ವಾರಭ್ಯ ಪ್ರಣೀಯ ಪ್ರಚರತಿ
ಅಪಃ ಪ್ರಣಯತಿ
ಅಪೋವೈ ಶಾನ್ತಾಃ ಶಾನ್ತಾಭಿರೇವಾಸ್ಯ
ಶುಚಗಂ ಶಮಯತಿ

ಈ ಮಂತ್ರದಿಂದ ಗಂಗೆ ಮತ್ತು ಏಳು ಪ್ರಧಾನ ನದಿಗಳ ಮತ್ತು ಪರುಷ್ಣೀ ಮುಂತಾದವುಗಳ ಶಾಖಾಸ್ವರೂಪದ ಮೂರು ನದಿಗಳ ಸ್ತುತಿಯು ಇದೆ. ಹೇ ಗಂಗೇ!, ಹೇ ಯಮುನೇ! ಹೇ ಸರಸ್ವತೀ! ಹೇಶುತುದ್ರಿ!ಹೇ ಪರುಷ್ಣೀ!, ಹೇ ಅಸಿಕ್ನ್ಯಾ ಸಹಿತ ಮರುದ್ವೃದೇ! ಹೇ ವಿತಸ್ತಾ ಮತ್ತು ಸುಷೋಮಾ ಸಹಿತ ಆರ್ಜೀಕೀಯೇ! ನೀವು ನನ್ನ ಈ ಸ್ತೋತ್ರಗಳನ್ನು ಆದರದಿಂದ ಕೇಳಿರಿ, ಸೇವಿಸಿರಿ ಮತ್ತು ನಮ್ಮನ್ನು ಅಭಿಮತ ಫಲ ಪ್ರದಾನ ದ್ವಾರಾ ಸಫಲತೆಯನ್ನು ಕೊಡುವಂತಾಗಿರಿ.

ಇಮಂ ಮೇ ಗಂಗೆ, ಯಮುನೇ ಸರಸ್ವತೀ
ಶುತುದ್ರಿ ಸ್ತೊಮ ಸಚತಾ ಪರುಷ್ಣ್ಯಾ
ಅಸಿಕ್ನ್ಯಾ ಮರುದ್ವೃದೇ ವಿತಸ್ತಯಾ
ऽऽರ್ಜೀಕೀಯೇ ಶ್ರುಣುಹ್ಯಾ
ಸುಷೋಮಯಾ

ಋಗ್ವೇದ ಮಂ 10 ಸೂ 75 ಮಂ 5.

ಹೇ ಇಂದ್ರ! ಪರಮೇಶ್ವರಾ! ನಿನ್ನ ಆಜ್ಞೆಯಿಂದ ಗಂಗಾದಿ ಜಲರೂಪದ ಏಳುನದಿ ದೇವತೆಗಳು ಅತ್ಯಂತ ಆನಂದದಿಂದ ನಿರ್ಭಾದಿತರಾದ ರೂಪದಲ್ಲಿ ಈ ಭೂಮಿಯಲ್ಲಿ ಹರಿಯುತ್ತಿವೆ. ಅಸುರರುಗಳ (ಮೇಘಗಳ) ಶರೀರಗಳನ್ನು ಭೇದನ ಮಾಡುವಂತಹ ಇಂದ್ರನೇ! ನೀನು ಗಂಗಾದಿ ನದಿಗಳಿಂದ ಸಮುದ್ರವನ್ನು ಹೆಚ್ಚಿಸಿರುವೆ ಮತ್ತು ನೀನೇ ಗಂಗಾದಿ ನದಿಗಳ - ತೀರ್ಥರೂಪಗಳ ದಡಗಳಲ್ಲಿ ಯಜ್ಞದ ಮೂಲಕ ದೇವತೆಗಳಿಗೆ ಹವಿಸ್ಸು ಪ್ರಧಾನಾರ್ಥವಾಗಿ ಮತ್ತು ಮನುಷ್ಯರ ಅಭಿಲಷಿತ ಫಲಪ್ರಾಪ್ತಿಗಾಗಿ ಗಂಗಾದಿ ನದಿಗಳಿಗೆ ಹರಿಯಲು ಮಾರ್ಗವನ್ನು ಮಾಡಿಕೊಟ್ಟಿರುವೆ.

ಸಪ್ತಾಪೋ ದೇವೀಃ ಸುರುಣಾ ಅಮೃಕ್ತಾ
ಯಾಭಿಃ ಸಿಂಧು ಮತರ ಇಂದ್ರ ಪೂರ್ಭಿತ್
ನವರ್ತಿಸ್ತೋತ್ಯಾ ನವ ಚ ಸ್ರವಂತಿ
ದೇವೇಭ್ಯೋಗಾತುಂ ಮನುಷೇ ಚ ವಿಂದಃ

ಋಗ್ವೇದ ಮಂ 10 ಸೂ 104 ಮಂ 8

ಒಬ್ಬ ಋಷಿಯು ಈ ರೀತಿ ನಿರ್ದೇಶಿಸುವನು - ಸುವಾಸ್ತು ಎಂಬ ನದಿಯ ದಡದಲ್ಲಿ ಪರ್ವದಿನಗಳಲ್ಲಿ ಮನುಷ್ಯರು ಅತ್ಯಂತ ಭಕ್ತಿಯಿಂದ ಸ್ನಾನಾರ್ಥವಾಗಿ ಬರುತ್ತಾರೆ ಇಂತಹ ತುಗ್ವ ನಾಮಧೇಯದ ತೀರ್ಥದಲ್ಲಿ ಪೌರುಕುತ್ಸ್ಯ ಎಂಬ ನಾಮದೇಯವುಳ್ಳ ಮಹಾದಾನಿಯಾದ ರಾಜನು ಅನಂತವಾದ ಕುದುರೆಗಳು, ವಸ್ತ್ರಗಳು, ಪಶುಗಳು, ಎತ್ತುಗಳು ಮತ್ತು ಅನೇಕ ಕನ್ಯೆಯರನ್ನೂ ಸಹ ನನಗೆ ದಾನಕೊಟ್ಟನು.

ಉತಮೇ ಪ್ರಯಿಯೋರ್ವಯಿಯೋಃ
ಸುವಾಸ್ತ್ವಾ ಅಧಿ ತುಗ್ವನಿ
ತಿಸೃಣಾಂ ಸಪ್ತತೀನಾಂ ಶ್ಯಾವಃ
ಪ್ರಣೇತಾಭುವದ್ ವಸುರ್ದಿಯಾನಾಂಪತಿಃ

- ಋಗ್ವೇದ ಮಂತ್ರ

ಸೋಮ ಯಜ್ಞದಲ್ಲಿ ಸೋಮಲತೆಯನ್ನು ಅರೆಯುವಾಗ, ಯಾವಾಗ ಅದರಿಂದ ರಸವು ಬರದೇ ಇರುವುದೋ ಆವಾಗ ಯಜಮಾನನು ಕೆಳಗೆ ತಿಳಿಸಿದ ಪ್ರಕಾರವಾಗಿ ಪ್ರಾರ್ಥನೆ ಮಾಡುವನು.

ಹೇ ಸೋಮ! ನೀನು, ಇಂದ್ರನು ಪಾನ ಮಾಡುವುದಕ್ಕಾಗಿ ರಸರೂಪದಲ್ಲಿ ಹೊರಗೆ ಬಾ. ಯಾವ ತೀರ್ಥದಲ್ಲಿ ಗಂಗಾ, ಯಮುನಾ ಮತ್ತು ಪೂರ್ವಾಭಿಮುಖವಾಗಿ ಹರಿಯುವ ಸರಸ್ವತಿಯು ಇರುತ್ತಾಳೋ ಮತ್ತು ಯಾವ ತೀರ್ಥದಲ್ಲಿ ಸೋಮೇಶ್ವರ, ಮಹಾದೇವನಿರುವನೋ ಅಲ್ಲಿ ನೀನು ಬಂದು, ನನಗೆ ಅಮೃತ ಮುಕ್ತಿಯನ್ನು ಅನುಗ್ರಹಿಸುವವನಾಗು.

ಯತ್ರ ಗಂಗಾ ಚ ಯಮುನಾಚೈವ
ಯತ್ರ ಪ್ರಾಚೀ ಸರಸ್ವತೀ
ಯತ್ರ ಸೋಮೇಶ್ವರೋ ದೇವಸ್ತತ್ರ ಮಾ
ಮಮೃತಂ ಕೃಧೀಂದ್ರಂ ಯೇಂದ್ರೋ
ಪರಿಸ್ರವ

ಋಗ್‌ಪರಿಶಿಷ್ಟ

ಯಾವ ತೀರ್ಥದಲ್ಲಿ ಗಂಗಾ ಮತ್ತು ಯಮುನಾ ಈ ಎರಡು ನದಿಗಳ ಸಂಗಮವಿದೆಯೋ ಅಂತಹ ತೀರ್ಥದಲ್ಲಿ ಸ್ನಾನ ಮಾಡುವಂತಹ ಪ್ರಾಣಿಯು, ಸ್ವರ್ಗವನ್ನು ಪಡೆಯುವುದು ಮತ್ತು ಯಾರು ಅಲ್ಲಿ ಶರೀರ ತ್ಯಾಗ ಮಾಡುವರೋ ಅವರು ಅಮೃತತ್ವ ಅರ್ಥಾತ್ ಮೋಕ್ಷವನ್ನು ಪಡೆಯುತ್ತಾರೆ.

ಸಿತಾ ಸಿತೇ ಸರಿತೇ ಯತ್ರ ಸುಗಂಧೇ
ತತ್ರಾಪ್ಲುತಾಸೋ ದಿವ ಮುತ್ಪತಂತೀ
ಯೇವೈ ತನ್ವಂ ವಿಸೃಜಂತಿ ಧೀರಾ
ಸ್ತೇ ಜನಾಸೋ ಅಮೃತತ್ವಂ ಭಜಂತೇ

- ಋಕ್ ಪರಿಶಿಷ್ಟ

ಮನುಷ್ಯರ ಕಲ್ಯಾಣಕ್ಕಾಗಿ ತೀರ್ಥಸೇವನೆ ಮತ್ತು ತೀರ್ಥಸ್ನಾನವು ಸರ್ವೋತ್ತಮ ಸಾಧನವಾಗಿದೆ. ಸಮಸ್ತ ತೀರ್ಥವೂ ಜಿತೇಂದ್ರಿಯರಿಗೆ ಮತ್ತು ಸತ್ಯವಾದಿಗಳಿಗೆ ಮಾತ್ರ ಪುಣ್ಯ ಪ್ರಧಾನ ಮಾಡುತ್ತದೆ ಎಂದು ಈ ಕೆಳಕಂಡ ಮಂತ್ರವು ತಿಳಿಸುತ್ತದೆ.

ಆ ಪೋ ಭೂಯಿಷ್ಠಾ ಇತ್ಯೇಕೋ ಅಬ್ರವೀ
ದಗ್ನಿ ಭೂಯಿಷ್ಠ ಇತ್ಯನ್ಯೋ ಅಬ್ರವೀತ್
ವಧರ್ಯಂತೀಂ ಬಹುಭ್ಯಃ
ಪೈಕೋ ಅಬ್ರವೀ
ದೃತಾ ವದಂತಶ್ಚಮಸಾ ಅಪಿಂಶತ

ಋಗ್ವೇದ ಸಂಹಿತಾಮಂಡಲ

ಸೂಕ್ತ 161 ಮಂತ್ರ 9

ಈ ಕೆಳಗಿನ ಮಂತ್ರದಲ್ಲಿ ಸರಸ್ವತೀ ಸರಯೂ ಮತ್ತು ಸಿಂಧು ನದಿಗಳನ್ನು ಯಜ್ಞರಕ್ಷಣಾರ್ಥವಾಗಿ ಆಹ್ವಾನಿಸಲಾಗಿದೆ. ಮತ್ತು ಅವುಗಳಲ್ಲಿ ಕಲ್ಯಾಣಕಾರಕವಾದ ತೀರ್ಥರೂಪ ಜಲಪ್ರಧಾನಕ್ಕಾಗಿ ಪ್ರಾರ್ಥಿಸಲಾಗಿದೆ.

ಸರಸ್ವತೀ ಸರಯುಃ ಸಿಂಧುರೂರ್ಮಿಭಿಃ
ಮಹೋ ಮಹೀರ ವಸಾಯಂತು ವಕ್ಷಣೀಃ
ದೇವೀರಾಪೋ ಮಾತರಃ ಸೂದಯಿತ್ನ್ವೋ
ಘೃತ ವತ್ಪಯೋ ಮದು ಮನ್ನೋ ಅರ್ಚತ

ಋಗ್ವೇದಮಂ 10

ಅಧ್ಯಾಯ 2 ವರ್ಗ 6 ಮಂತ್ರ 9

ಯಾವ ರುದ್ರನು ತನ್ನ ಕೈಯಲ್ಲಿ ಕತ್ತಿ, ಪಿನಾಕ, ಧನುಸ್, ಮುಂತಾದ ಆಯುಧಗಳನ್ನು ಹೊಂದಿದವನಾಗಿ ಪ್ರಯಾಗ. ಕಾಶೀಮುಂತಾದ



ತಿರುಮಂಜನ



# ತಿರುಮಲೆಯಲ್ಲಿ ವಸಂತೋತ್ಸವ



↑ ಸಾಲಂಕೃತ ಉತ್ಸವ ಮೂರ್ತಿಗಳು.

← ಆಜ್ಞಾಪಾಲಕ ಹನುಮಂತ.

↓ ಸುವರ್ಣ ರಥೋತ್ಸವ.







ಶ್ರೀ ಸೀತಾರಾಮ ಲಕ್ಷ್ಮಣರು,

ಶ್ರೀ ಭೂ ಸಹಿತ ಮಲಯಪ್ಪಸ್ವಾಮಿ,

ಶ್ರೀ ರುಕ್ಮಿಣೀ ಕೃಷ್ಣಸ್ವಾಮಿ.



↑ ಶ್ರೀ ರುಕ್ಮಿಣೀ ಕೃಷ್ಣಸ್ವಾಮಿ.

← ಶ್ರೀ ಸೀತಾರಾಮೆ ಲಕ್ಷ್ಮಣರು.

↓ ಶ್ರೀ ಭೂ ಸಹಿತ ಮಲಯಪ್ಪಸ್ವಾಮಿ.



ತೀರ್ಥಗಳಲ್ಲಿ ಸುತ್ತಾಡುತ್ತಾ ಧರ್ಮದ ಪ್ರಚಾರ ಮಾಡುವನೋ ಅಂತಹ ರುದ್ರದೇವರು ತೀರ್ಥಸೇವನೆ ಮಾಡುವ ನಮ್ಮಂತಹ ಮನುಜ ಕುಲವನ್ನು ಸೌಭಾಗ್ಯದಿಂದ ಹರಸಲಿ.

ಯೇ ತೀರ್ಥಾ ಪ್ರಚರಂತಿ
ಸೃಕಾಹಸ್ತಾನಿಷಂಗಿಣಃ
ತೇಷಾಗಂ ಸಹಸ್ರಯೋಜನೇಽ
ವಧನ್ವಾನಿತನ್ಮಸಿ — ಶುಕ್ಲಯಜುರ್ವೇದ

ಈ ಕೆಳಕಂಡ ಮಂತ್ರಗಳಲ್ಲಿ ತೀರ್ಥಗಳಿಗೆ ಹೃತ್ಪೂರ್ವಕ ವಂದನೆಗಳನ್ನು ವಿನಿಯೋಗಿಸಿದೆ.

1) ನಮಃಸ್ತೀರ್ಥ್ಯಾಯ ಚ ಕೂಲ್ಯಾಯ ಚ ನಮಃ (ಶುಕ್ಲಯಜುರ್ವೇದ 16-42)

2) ಪಾವಕಾಃನಃ ಸರಸ್ವತೀ ವಾಜೇ ಭಿರ್ವಾಜನೀವತೀ ಯಜ್ಞಂ ವಷ್ಟುಧಿಯಾವಸುಃ (ಸಾಮಸಂಹಿತೆ ಪೂರ್ವಾರ್ಚಿತ ಪ್ರತಿ ಉತ್ತರಾರ್ಧದಶಕೇ 4 ಮಂಡಲ 5)

ಯಾವ ಪ್ರಕಾರವಾಗಿ ಯಜ್ಞಕರ್ತೃವಾದ ಯಜಮಾನನು ಯಜ್ಞಾದಿಗಳ ದ್ವಾರಾ ದೊಡ್ಡ ದೊಡ್ಡ ಆಪತ್ತುಗಳಿಂದ, ಕ್ಲೇಶದಾಯಕ ತಾಪತ್ರಯಗಳಿಂದ ಮುಕ್ತನಾಗಿ ಪುಣ್ಯಲೋಕದ ಪ್ರಾಪ್ತಿಯನ್ನು ಹೊಂದುವನೋ ಅದೇ ಪ್ರಕಾರವಾಗಿ ತೀರ್ಥಯಾತ್ರೆಗಳನ್ನು ಮಾಡುವಂತಹ ಭಕ್ತರು ಆ ತೀರ್ಥಗಳ ಮೂಲಕ ದೊಡ್ಡ ದೊಡ್ಡ ಭಯಂಕರವಾದ ಪಾಪಗಳಿಂದ ಮತ್ತು ಆಪತ್ತುಗಳಿಂದ ಮುಕ್ತರಾಗಿ ಮುಕ್ತಿಲೋಕದ ಪ್ರಾಪ್ತಿಯನ್ನು ಪಡೆಯುವರು ಎಂದು ಈ ಕೆಳಗಿನ ಮಂತ್ರವು ಅರ್ಥೈಸುತ್ತದೆ.

ತೀರ್ಥೈಸ್ತರಂತಿ ಪ್ರವತೋ ಮಹೀರತೀ
ಯಜ್ಞಃ ಕೃತಃ ಸುಕೃತೋ ಯೋನಯಂತಿ
ಅತ್ರಾದ ದುರ್ಯಜಮಾನಾಯ ಲೋಕಂ
ದಿಶೋ ಭೂತಾನಿ ಯದ ಕಲ್ಪಯಂತ
ಅಥರ್ವವೇದ ಕಾಂಡ 7
ಅ 4 ಸೂ 4 ಮಂ8

ಈ ಪ್ರಕಾರವಾಗಿ ತೀರ್ಥಗಳ ಅಪೂರ್ವ ಮಹಿಮೆಯನ್ನು ಸಂಗ್ರಹಿಸಿಕೊಡಲು ಪ್ರಯತ್ನಿಸಲಾಗಿದೆ. ಸಕಲ ಶ್ರುತಿ, ಸ್ಮೃತಿ, ಪುರಾಣಗಳೂ, ಆಗಮಗಳೂ, ಆಳ್ವಾರರು ಮತ್ತು ಆಚಾರ್ಯರ ಎಲ್ಲಾ ದಿವ್ಯ ಸೂಕ್ತಿಗಳಲ್ಲಿ ತೀರ್ಥಗಳ ಮಹಿಮೆಯನ್ನು ವೈಶಿಷ್ಟ್ಯಪೂರ್ಣವಾಗಿ, ಅಪಾರವಾಗಿ ಬಣ್ಣಿಸಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಈ ಮೂಲಕವಾಗಿ ಸನಾತನ ಧರ್ಮದಲ್ಲಿ ನಿಷ್ಠೆಯಿಟ್ಟಿರುವ ಸಕಲ ಭಾರತೀಯರೂ, ಇತರ ತೀರ್ಥಯಾತ್ರಾ ಪ್ರೇಮಿಗಳು ಒಂದಕ್ಕೆ ಹತ್ತಾಗಿ, ಅವರ ಜೀವಿತ ಕಾಲವನ್ನು ಸಾರ್ಥಕ ಪಡಿಸಿಕೊಳ್ಳುವಂತೆ ಅವಕಾಶ ಕಲ್ಪಿಸಿಕೊಂಡು ತೀರ್ಥಯಾತ್ರೆಗಳನ್ನು ಕೈಗೊಂಡು ತನ್ಮೂಲಕ ಇಹಪರ ಸೌಖ್ಯಕ್ಕೆ ಮತ್ತು ಮುಕ್ತಿ ಸಾಮ್ರಾಜ್ಯಕ್ಕೆ ಸುಲಭ ಮಾರ್ಗವನ್ನು ಕಂಡುಕೊಳ್ಳುವರಾಗಬೇಕು ಎಂಬುದು ಈ ಲೇಖಕನ ಮನತುಂಬಿದ ಹರಕೆ.



## ತಿರುಮಲತಿರುಪತಿ ದೇವಸ್ಥಾನಗಳು, ತಿರುಪತಿ.

### ಹಳೆಯ ತಿ.ತಿ.ದೇ. ಪುಸ್ತಕಗಳಿಗಾಗಿ

### *ಪಾಠಕ ಲೋಕಕ್ಕೆ ವಿನಂತಿ*

ತಿ. ತಿ. ದೇವಸ್ಥಾನಗಳು ಮಹಂತರ ಕಾಲದಿಂದಲೂ ಧಾರ್ಮಿಕ ಪುಸ್ತಕಗಳನ್ನು ಪ್ರಕಟಿಸುತ್ತ ಓದುಗರ ಧಾರ್ಮಿಕ ದಾಹವನ್ನು ತಣಿಸುವ ಕೈಂಕರ್ಯ ನಡೆಸುತ್ತಲೇ ಬಂದಿದೆ. ಇಪ್ಪತ್ತನೇ ಶತಮಾನದ ಆದಿಯಿಂದ ಕಳೆದ ಒಂದು ನೂರು ವರ್ಷಗಳಲ್ಲಿ ಒಂದು ಸಾವಿರದೈನೂರು ಪುಸ್ತಕಗಳಿಗೂ ಮಿಕ್ಕಿ ಪ್ರಕಟಿಸಿದ್ದಾಗಿದೆ. ತೆಲುಗು, ತಮಿಳು, ಆಂಗ್ಲ, ಹಿಂದಿ, ಕನ್ನಡ ಭಾಷೆಗಳಲ್ಲಿ ಹಲವು ಹನ್ನೊಂದು ಜನಪ್ರಿಯ ಪುಸ್ತಕಗಳನ್ನು ಶ್ರೀಸಾಮಾನ್ಯನಿಗೆ ಸುಲಭವಾದ ದರದಲ್ಲಿ ಸಿಗುವಂತೆ ಮಾಡಿರುವುದು ಸರ್ವವಿದಿತ.

ಹಲವು ಜನಪ್ರಿಯ ಕೃತಿಗಳನ್ನು ಹಲವಾರು ಬಾರಿ ಪುನರ್ಮುದ್ರಣ ಮಾಡಿ ಓದುಗರ ಬೇಡಿಕೆಯನ್ನು ಪೂರೈಸುತ್ತ, ಗ್ರಂಥಗಳ ಬಗ್ಗೆ ಪಾಠಕರ ಆಸಕ್ತಿಯನ್ನು ಒಂದೇ ಸಮನೆ ಕಾಯ್ದುಕೊಂಡು ಬರುವಲ್ಲಿ ಸಫಲವಾಗಿದೆ. ಆದರೆ ಈಚೆಗೆ ಹಲವು ಕಾಲದಿಂದಲೂ ಪ್ರಾಚೀನ ಪುಸ್ತಕಗಳಿಗೆ ಬೇಡಿಕೆ ಹೆಚ್ಚಾಗುತ್ತಿದ್ದು ಅವುಗಳ ಪುನರ್ಮುದ್ರಣದ ಅಗತ್ಯ ತೀವ್ರತರವಾಗುತ್ತಿದೆ.

ತಿ. ತಿ. ದೇವಸ್ಥಾನಗಳಿಂದ 1980 ರ ಮೊದಲು ಪ್ರಕಟವಾದ ಪುಸ್ತಕಗಳು ತಿ.ತಿ. ದೇವಸ್ಥಾನಗಳಿಗೆ ಅಗತ್ಯ. ಒಂದು ಡಿಜಿಟಲ್ ಲೈಬ್ರರಿಯನ್ನು ತೆರೆಯುವ ಯೋಜನೆಯಿದೆ. ತಮ್ಮಲ್ಲಿ ಹಳೆಯ ತಿ.ತಿ.ದೇ. ಪುಸ್ತಕಗಳಿದ್ದಲ್ಲಿ ಅವನ್ನು ತಿ. ತಿ. ದೇವಸ್ಥಾನಗಳಿಗೆ ನೀಡಬೇಕೆಂದು ವಿನಂತಿ. ತಮ್ಮ ಪುಸ್ತಕವನ್ನು ಫೋಟೋಪ್ರತಿ ಮಾಡಿಕೊಂಡು ಕೃತಜ್ಞತೆಯಿಂದ ಹಿಂದಿರುಗಿಸಲಾಗುತ್ತದೆ. ತಾವು ಈ ಪುಸ್ತಕಗಳನ್ನು ಉಚಿತವಾಗಿ ಅಥವಾ ಪ್ರತಿಫಲಸಹಿತವಾಗಿ ನೀಡಬಹುದಾಗಿದೆ.

ತಮ್ಮ ಬಳಿಯಲ್ಲಿನ ಪುಸ್ತಕದ ಹೆಸರು, ಮುದ್ರಣವರ್ಷ, ಲೇಖಕರು, ಸಂಪಾದಕರು ಮೊದಲಾದವುಗಳ ವಿವರಗಳನ್ನೂ, ತಮಗೆ ಬೇಕಾದ ರೀತಿಯ ಪ್ರತಿಫಲವನ್ನೂ ಕುರಿತು ಕೂಡಲೇ **ಸಂಪಾದಕರು ತಿ.ತಿ.ದೇ. ತಿರುಪತಿ - 517 507** ಇವರಿಗೆ ಕಾಗದ ಬರೆದು ತಿಳಿಸಬೇಕಾಗಿ ವಿನಂತಿ.

**ಸಂಪಾದಕರು,**
ಸಪ್ತಗಿರಿ, ತಿ.ತಿ.ದೇ.

# ದಾಸರ ಸಾಮಾಜಿಕ ಪ್ರಜ್ಞೆ ಹಾಗೂ ಸಾಮಾಜಿಕ ವಿಮರ್ಶೆ

- ಪ್ರೊ|| ವಸಂತ ಕುಷ್ಟಗಿ.

ಕನ್ನಡ ನಾಡಿನಲ್ಲಿ ಹದಿಮೂರನೆಯ ಶತಮಾನದಿಂದ ನಿರಂತರವಾಗಿ ಭಾಗವತಧರ್ಮವನ್ನು ಮನನ ಮಾಡಿಕೊಂಡ ಸಾವಿರಾರು ಹರಿದಾಸರು, ಮನುಷ್ಯನ ಸಮಾಜದ ಬದುಕಿನಲ್ಲಿ ಆಗಾಗ ದತ್ತಸ್ವಾತಂತ್ರ್ಯಕ್ಕೆ ಅವಿವೇಕದ ಮೋಡಗಳು ಕವಿದಾಗ ಅದನ್ನೆಲ್ಲ ದೂರಸರಿಸಿ, ನಿಚ್ಚಳತೆಯನ್ನು ತರುವ ಕೆಲಸವನ್ನು ನಿರಂತರವಾಗಿ ಮಾಡುತ್ತ ಬಂದಿದ್ದಾರೆ. ಸಮಾಜದಲ್ಲಿ ನಿರಂತರವಾಗಿ ಆರೋಗ್ಯವನ್ನು ಕಾಪಾಡಲು ತಮ್ಮ ಆಯುಷ್ಯವನ್ನೇ ಧಾರೆಯೆರೆದಿದ್ದಾರೆ. ಅನಿಷ್ಟಗಳನ್ನು ಸಮಾಜದಿಂದ ತಳಕೀಳಲು ನಿಷ್ಠುರವಾಗಿ ಸಾಮಾಜವನ್ನು, ಧರ್ಮವನ್ನು ವಿಮರ್ಶೆಮಾಡಿದ್ದಾರೆ. ಜನಪರ ಹಿತವನ್ನು ಕಾಪಾಡಲು ಹೆಣಗಾಡಿದ್ದಾರೆ. ''ಮಾನವ ಜನ್ಮದೊಡ್ಡದು, ಇದ ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ'' ಎಂದು ಬೆನ್ನುತಟ್ಟಿ ಎಚ್ಚರಿಸಿದ್ದಾರೆ. ಹಣೆಯ ಬರಹದಲ್ಲಿ ಇದ್ದಂತೆ ಆಗುತ್ತದೆಂದು ಕಣ್ಣು ಮುಚ್ಚಿಕೊಂಡು ಕೂಡಬೇಕೆಂದು ಅವರು ಎಂದೂ ಉಪದೇಶಿಸಲಿಲ್ಲ. ಪರ್ಯಾಯವಾಗಿ ಅವರು, ''ಪ್ರಯತ್ನಮೇಕಮಗ್ರತೋ ನಿಧಾಯಭೂತಿ ಮಾಪ್ನುವಃ'' ಎಂದು ನಂಬಿ ಬಾಳಿದರು. ನಾರಾಯಣನಿಗೆ ''ಸ್ವಯೋಗ್ಯತೆ ಯೊಳಗೆ ಆಯತವಾದ್ದದು, ಸೋಯದೆ ಉಣ್ಣುವುದೆ ನ್ಯಾಯದ ವೈರಾಗ್ಯ; ಆಯಾಸಪಡದೆ ಪರರ ಶ್ರೇಯಸ್ಸು ನೋಡಿ, ಶ್ರೀಯರಸನಿತ್ತನೆಂಬುದೆ ವೈರಾಗ್ಯ; ನೇಹದಿ ಹರಿಯಿತ್ತಕರ್ತೃತ್ವವು ನನಗೆ, ನೀಯಲ್ಲದೆ, ಎನ್ನೆರಿದಾಗದೆಂತಿಪ್ಪುದೆ ನ್ಯಾಯದ ವೈರಾಗ್ಯ.... ಅರಿಯದ ವೈರಾಗ್ಯ ಹರಹಿಕೊಂಬುದಕ್ಕಿಂತ, ಅರಿತು ಮೊರೆ ಹೋಗಿರೋ ಎಂಬ ಗೋಪಾಲದಾಸರ ವಾಣಿಯು ಈ ಅಭಿಪ್ರಾಯಕ್ಕೆ ಪೂರಕ. ಮುಂದಿನ ಬದುಕಿಗೆ ಪ್ರೇರಕ.''

ಹರಿದಾಸಸಾಹಿತ್ಯದಲ್ಲಿ ಇಂತಹ ಸಮಾಜ ವಿಮರ್ಶೆಯ ಸ್ಫಟಿಕದ ಶಿಲಾಕೆಗಳು, ಮುತ್ತಿನಹಾರಗಳು ಬಿಡಿಸಿ ತೋರಿದೆಡೆಗಳಲ್ಲೆಲ್ಲ ದೊರೆಯುತ್ತವೆ. ಈ ಪ್ರಕಾಶದಲ್ಲಿ ಅಂತರಂಗದ ಚೆಲುವು ಹಿಗ್ಗಿ ಅಲ್ಲಿ ಸ್ವಾನಂದದ ಹೇಳಲಾಗದ ಸವಿಯ ನಿರಂತರಧಾರೆ ಈ ಹಿನ್ನೆಲೆಯಲ್ಲಿ ಉಳಿದೆಲ್ಲ ಸಾಹಿತ್ಯದ ಮಾತುಗಳಂತೆ ಹರಿದಾಸರ ಸಾಹಿತ್ಯದ ನುಡಿ ಮುತ್ತುಗಳೂ ಸಮಾಜವನ್ನು ಚಿಕಿತ್ಸೆಗೆ ಒಳಪಡಿಸುವ ಸದಾಕಾಲದ ಸಂಜೀವಿನಿ ಶಕ್ತಿಯನ್ನು ಪಡೆದಿವೆ. ಏಕೆಂದರೆ ಸಮಾಜದ ಸ್ಥಿತಿಯು ಎಂದೆಂದಿಗೂ ಹಾಗೆ ಹಾಗೇ ಇರುತ್ತದೆ. ಸಾಮಾನ್ಯವಾಗಿ ಹೊಟ್ಟೆ ಹೊರೆಕೊಳ್ಳಲು ಕಾಲಧರ್ಮದ ಹೆಸರಿನಲ್ಲಿ ಡಂಭಾಚಾರದ ಧರ್ಮಧ್ವಜರಾಗಿ ಅನೇಕರು ಮೆರೆಯುತ್ತಿರುವುದು ಮನುಷ್ಯ ಸಹಜ ದೌರ್ಬಲ್ಯ. ಇಂತಹ ದೌರ್ಬಲ್ಯವನ್ನು ಕುರಿತು ಸಸಿನೆ ಮಾಡಲು ಅಂದು ಪುರಂದರ ದಾಸರು ಹಾಡಿದ ಪದಗಳು, ಇಂದಿಗೂ ಸಾಮಾಜಿಕ ರಾಜಕೀಯ ಧಾರ್ಮಿಕ ನೆಲೆಗಳಲ್ಲಿ ಚಿಕಿತ್ಸೆ ನೀಡುವ ಕ್ಷಕಿರಣಗಳಾಗಿವೆ.

ಒಡೆಯ ಹರಿಸರ್ವೋತ್ತಮನೆಂಬ
ದೃಢಜ್ಞಾನಿಗಳೆ ವೈಷ್ಣವರಲ್ಲದೆ, ಇಂಥ
ತುಡುಗ ಮುಂಡೇಗಂಡರಿಗಿನ್ನು
ವೈಷ್ಣವ ಸಲ್ಲುವುದೆ || ಪ ||
ಗಡ್ಡಾಮೀಸೆ ಬೋಳಿಸಿಕೊಂಡು
ದೊಡ್ಡನಾಮ ತೀಡಿಕೊಂಡು
ಅಡ್ಡಾದಿಡ್ಡಿ ಮುದ್ರೆಗಳು ಬಡಿದುಕೊಂಡು
ದೊಡ್ಡ ದೊಡ್ಡ ಮಾತುಗಳಾಡಿ
ದೊಡ್ಡವರೆಂದೇಳಿಕೊಂಬ
ಬಡ್ಡಿಧಗಡೀ ಮಕ್ಕಳಿಗಿನ್ನು
ವೈಷ್ಣವ ಸಲ್ಲುವುದೇ || 1 ||

ಇಂತಹ ಡಂಭಾಚಾರದ ಇರುವನ್ನು ಟೀಕಿಸುವ ಕನಕದಾಸರ ನುಡಿಯಲ್ಲಿಯ ಪ್ರಖರತೆಯಲ್ಲಿಯೂ ಅದೇ ಸಮಾಜ ಚಿಕಿತ್ಸೆಗಾಗಿ ಇರುವ ತೀಕ್ಷ್ಣ ಸಮಾಜವಿಮರ್ಶೆಯಾಗಿದೆ :

ಎಲ್ಲಾರು ಮಾಡುವುದು ಹೊಟ್ಟೆಗಾಗಿ
ಗೇಣುಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ || ಪ ||
ತಾಳದಂಡಿಗೆಶ್ರುತಿಮೇಳ
ತಂಬೂರಿಗೊಂಡು
------ಕುಣಿಯುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ || 1 ||

ಅಬ್ಬಾ, ಇದೆಂತಹ ಶಸ್ತ್ರಚಿಕಿತ್ಸೆ!

ಸಮಾಜದಲ್ಲಿ ಯಾವುದಕ್ಕೋ ದೇವ ದೇವತೆಗಳ ಹೆಸರನ್ನಿಟ್ಟು, ಸ್ವಾರ್ಥ ಸಾಧನೆಗಾಗಿ ಕಾರ್ಯಕೌಶಲ ಚಮತ್ಕಾರಗಳ ಹೆಸರಿಟ್ಟು ಮುಗ್ಧ ಜನತೆಯನ್ನು ದಿಕ್ಕು ತಪ್ಪಿಸಿ ಶೋಷಣೆಗೆ ಒಳಪಡಿಸುವ ರೀತಿಯನ್ನು ಕನಕದಾಸರು ಖಂಡಿಸಿದ್ದು ಇಂದಿನ ಬದುಕಿಗೂ ಮಾರ್ಗದರ್ಶಿ :

ಕಣಿಯ ಹೇಳಬಂದೆ
ನಾರಾಯಣನಲ್ಲದಿಲ್ಲವೆಂದು, ಸಿಕ್ಕ
ಬಣಗು ದೈವದ ಗೊಡವೆ
ಬೇಡ ನರಕ ತಪ್ಪದು || ಪ ||
ಹೊಳ್ಳದ ಬಿಚ್ಚೇರು ತಾವು
ಸುಳ್ಳರೆಲ್ಲರು ಕೂಡಿಕೊಂಡು
ಬೆಳ್ಳನೆ ಬೆಳತನಕ ನೀರ
ತಡಿಯಲ್ಲಿ ಕುಳಿತು
ಗುಳ್ಳುಗೊರಜಿ ಕೂಡಿ ತಿಂದು
ಕಳ್ಳುಕೊಡವ ಬರಿದುಮಾಡಿ ಇಂಥ
ಪೊಳ್ಳುದೈವದ ಗೊಡವೆ ಬೇಡ
ನರಕ ತಪ್ಪದು || 4 ||

ಇಂಥದೇ ಖಂಡನೆಯನ್ನು ಪುರಂದರ ದಾಸರು ಮತ್ತೊಂದು ರೀತಿಯಲ್ಲಿ,

ಬೇವ್ಮಡಿಯನ್ನುಟ್ಟು ಬೆನ್ನು ಪಿಡಿಯನೇರಿ
ಚಿಮ್ಮುತ ಒಲೆ ಬೊಬ್ಬೆಗಳಿಡುತ್ತ
ಕರ್ಮಕ್ಕೆ ಗುರಿಯಾಗಿ

ಪ್ರಾಣಿಹಿಂಸೆಯ ಮಾಳ್ಪ
ಹತ್ಯಕಾರರ ಎಳೆದು ತನ್ನಿರೋ''

ಎಂದು ಸಿಡಿದೇಳುತ್ತ ಸಮಾಜದಲ್ಲಿಯ ಅನಿಷ್ಟಗಳ ಉಚ್ಚಾಟನೆಗೆ ಕಳಕಳಿಯ ಕರೆ ನೀಡಿರುವುದು ಹರಿದಾಸ ಪರಂಪರೆಯಲ್ಲಿಯ ಸಾಮಾಜಿಕ ಕಳಕಳಿಗೆ ಇರುವ ಮಹತ್ವದ ಒತ್ತಿಗೆ ಇರುವ ನೆಲೆಯ ಬಿತ್ತು.

ಬುದ್ಧಿಗೆ ವಿವೇಕದ ನೆರವಿನ ಅಂಶವು ಕಡಮೆಯಾಗ ತೊಡಗಿದಾಗ ನಿರರ್ಥಕವಾದ ಮಡಿವೈಲಿಗೆಗಳು ತಮ್ಮ ಆಡಂಬರ ಅಟ್ಟಹಾಸಗಳಿಂದ ನೆಮ್ಮದಿ ಸಮಾಜವನ್ನು ಕದಡತೊಡಗಿದಾಗ,

''ಮಡಿ ಮಡಿಯೆಂದು
ಮುಮ್ಮಾರು ಹಾರುತಿ
- ಮಡಿಯೆಲ್ಲಿ ಬಂತೋಭಿಕನಾಶಿ''

......ಮಡಿ ಮಾಡುವ ಬಗೆ ಬೇರುಂಟು
......ಸತ್ಯವೇ ಸ್ನಾನ ಜಪ, ನೇಮ, ಹೋಮ,
ಅಸತ್ಯದಲಿ ನಡೆದು ಮಾಳ್ಪುದು ವ್ಯರ್ಥ ಕರ್ಮ.

- ಎಂದು ಹರಿದಾಸರು ನಿರ್ದಾಕ್ಷಿಣ್ಯವಾಗಿ ಖಂಡಿಸಿ, ಉತ್ತಮ ಬದುಕಿನ ಬಗೆಯನ್ನು ತಿಳಿ ಹೇಳಿರುವುದೂ ಕೂಡ ಅವರಲ್ಲಿರುವ ಸಾಮಾಜಿಕ ಕಳಕಳಿಗೆ ಒಂದು ಮಾದರಿ.

ಅದೇ ರೀತಿ ಹರಿದಾಸರು ಕುಲದಬಗ್ಗೆ ಸ್ಪಷ್ಟ ಕಲ್ಪನೆಯನ್ನೇ ಪ್ರಸಾರ ಮಾಡಿದ್ದಾರೆ. ಅವರ ಆ ದಿಟ್ಟ ಕಲ್ಪನೆಯ ನಿಲುವು ಇಂದಿನ ಕಾಲಕ್ಕೂ ಅಪ್ಯಾಯಮಾನ. ಅವರು ''ಕುಲ ಕುಲವೆಂದು ಹೋರಾಡದಿರಿ'' ಎಂದು ಕರೆ ನೀಡಿ, ''ಹುಟ್ಟದಯೋನಿಗಳಿಲ್ಲ; ಮೆಟ್ಟದ ಭೂಮಿಗಳಿಲ್ಲ; ಅಟ್ಟುಣ್ಣದ ವಸ್ತುಗಳಿಲ್ಲ - ಗುಟ್ಟು ಕಾಣಿಸಬಂತು ಹಿರಿದೇನು ಕಿರಿದೇನು ನೆಟ್ಟನೆ ಸರ್ವಜ್ಞನ ನೆನಕಂಡ್ಯ'' ಎಂದು ಜಾತಿ ಮತಗಳ ವಿವಾದಾಸ್ಪದ ಕಟ್ಟುಗಳನ್ನು ಬಿಡಿಸಲು ಪ್ರಯತ್ನಿಸಿರುವುದು ಇತಿಹಾಸ ಸತ್ಯ, ಮುಂದುವರೆದು ಅವರ ಹೊಲೆತನವನ್ನೂ ವಿಶ್ಲೇಷಿಸುವ ದೃಷ್ಟಿಯಂತೂ ಅಗಾಧವಾದದ್ದು. ಇಂದಿನ ಲೇಸರ್ ಚಿಕಿತ್ಸೆಗಿಂತ ಅದ್ಭುತವಾದದ್ದು. ಸಾಮಾಜಿಕ ಸಮಭಾವ ಪ್ರಜ್ಞೆಯನ್ನು ಬಿಡಿಸಿಡುವಲ್ಲಿ ಅವರ ಈ ನಿಟ್ಟಿನ ಪದ ಪದ್ಯ ಸುಳಾದಿ ಉಗಾಭೋಗಗಳು ಉತ್ತಮ ಅನುಷ್ಠಾನ ಪ್ರವಚನಗಳು. ಅಂತಹ ಕೆಲವು ಪಾದಗಳು ಇಂತಿವೆ.

''ಹೊಲೆಯ ಬಂದನೆಂದು
ಒಳಗೆ ದೇವರ ಮಾಡಿ
ಗಣ ಗಣ ಗಂಟೆ ಬಾರಿಸುವರಯ್ಯಾ!
ತನುವಿನಕೋಪವು ಹೊಲೆಯಲ್ಲವೆ?
ಪರಧನ ಪರಸತಿ ಹೊಲೆಯಲ್ಲವೆ?
ಹೊರಗಿದ್ದ ಹೊಲೆಯನ ಒಳಗಿಟ್ಟು

ಬಚ್ಚಿಟ್ಟರೆ ಇದಕೇನು ಮದ್ದೋ''

ಎಂದು ಕೇಳಿದ ಪುರಂದರ ದಾಸರ ವಿಚಾರಗಳು, ಹರಿದಾಸರು ಜಾತಿಮತಗಳ ಬಗ್ಗೆ ತಾಳಿರುವ ದಿಟ್ಟನಿಲುವಿನ್ನೇ ಇಲ್ಲಿ ಹಾಡಿಹರಸಿವೆ. ಅಲ್ಲದೆ ಅವರು ಸುಂದರ ಸಮಾಜದ ಚಲನೆಗೆ, ಅನಿಷ್ಟಗಳನ್ನು ನಿವಾರಿಸುವ ದಿಟ್ಟ ಚಿಕಿತ್ಸಾ ನೀತಿಯನ್ನು ಇಲ್ಲಿ ಸ್ಪಷ್ಟಗೊಳಿಸಿರುವುದು ಸ್ಪಷ್ಟ. ಇದೆಲ್ಲ ಅವರ ದೃಷ್ಟಿಕೋನದಲ್ಲಿರುವ ಸಾಮಾಜಿಕ ಪ್ರಜ್ಞೆಯ ಸತ್ಯಸ್ವರೂಪವೂ ಹೌದು.

ಇಂಥ ದಿಟ್ಟ ನಿಲುವನ್ನು ತಾಳಿ ಬಾಳಿದುದರಿಂದಲೇ ಹರಿದಾಸರು ಸುಲಭವಾದ ಅನುಭವದ ದೃಷ್ಟಾಂತಗಳಿಂದ ಸಾಮಾಜಿಕರಿಗೆಲ್ಲ ಸಾಮಾಜಿಕ ಸಮಚಿತ್ತವನ್ನು ಬೆಳೆಸಿಕೊಂಡು ಇಹ - ಪರಗಳನ್ನು ಸಾಧಿಸಲು ಅತ್ಯಂತ ಸದೃಢ ಉಪಾಯಗಳನ್ನು ಬದುಕು, ಬದುಕಿಸು ತತ್ವಗಳ ಸಾಧನೆಗಾಗಿ ನೀಡಿರುವ ನಡೆನುಡಿ ಸಿದ್ಧಾಂತವೇ ಬದುಕುವ ಕಲೆಯ ಸಾಹಿತ್ಯವಾಗಿ ಪರಿಣಮಿಸಿರುವುದು ನಮ್ಮ ತವನಿಧಿಯ ಬೆಳಕಿನ ಭಾಗ್ಯ. ಅಂತೆಯೇ ಅವರು, ಅಂಜಬೇಡ ಅಂಜಬೇಡವೆಲೇ ಜೀವ - ಭವಭಂಜನ ಹರಿಶರಣರಕಾವ-ಎಂಬ ಧೈರ್ಯವನು



ಶ್ರೀಪಾದರಾಜರು

ಜೀವಿಗಳಿಗೆ, ನೀಡುತ್ತ, ''ಜರಿಯಬೇಡ, ಹರಿಯ ಮರೆಯ ಬೇಡೆಂದೆಂದು ತಿರಿಯಬೇಡ ಖಳರ ಮನೆಗೆ ಪೋಗಿ....। ಸಾಲಮಾಡಲಿಬೇಡ ಸಾಲದೆಂದೆನಬೇಡ । ನಾಳೆಗೆ ಹೇಗೆಂಬ ಚಿಂತೆಬೇಡ । ಖೂಳಜನರೊಡನೆ ಮಿತ್ರತ್ವ ಮಾಡಲಿ ಬೇಡ । ಬಾಳುವರ ಸಂಗದಲಿ ಬಾಳಿಲವೊ ಬಾಲ'' - ಎಂದು ವಿಜಯದಾಸರು ಮೋಹನದಾಸರಿಗೆ ಹರಸುವ ಧ್ವನಿಯಲ್ಲಿ ಜೀವಿಗಳಿಗೆ ಗಂಡುಗಲಿಯಾಗಿ ಬದುಕಬೇಕೆಂಬ ನೀತಿ ಬೋಧನೆಯು ತುಂಬು ತುಳುಕು ತುಂಬಿದೆ.

ಹರಿದಾಸರು, ಅನೇಕ ವೈರುಧ್ಯಗಳಿಂದ ತುಂಬಿರುವ ಸಮಾಜದಲ್ಲಿ ಸದಾಚಾರಿಯಾಗಿ ಮನುಷ್ಯನು ಸುಂದರವಾಗಿ ಬದುಕಬೇಕಾದರೆ, ಆತನು ''ಕಲ್ಲಾಗಿ ಇರಬೇಕು ಕಠಿಣಭವ ತೊರೆಯೊಳಗೆ । ಬಿಲ್ಲಾಗಿ ಇರಬೇಕು ಬಲ್ಲವರೊಳು। ಮೆಲ್ಲನೆ ಮಾಧವನ ಮನದಿ ಮೆಚ್ಚಿಸಬೇಕು । ಬೆಲ್ಲವಾಗಿರಬೇಕು ಬಂಧು ಜನರೊಳಗೆ । ....ವಿಜಯಭೋಗದ ತೃಣಕೆ ಉರಿಯಾಗಿರ ಬೇಕು । ನಿಶಿಹಗಲು ಶ್ರೀಹರಿಯ ಭಜಿಸಬೇಕು....'' - ಎಂಬಂತಹ ಮೌಲ್ಯದ ಉಪಾಯಗಳನ್ನು, ಬದುಕುವ ಕಲೆಯನ್ನು ಸೂಚಿಸಿರುವುದು ತ್ರಿಕಾಲಕ್ಕೂ ಅನುಭೂತಿ ಯಾಗಿರುವಂತಹದು. ಸಮಾಜದಲ್ಲಿಯ ಈ ಸಾಧನಾಮಾರ್ಗದಲ್ಲಿ ಸಾಗುವಾಗ ಅವರು ಸೂಚಿಸಿರುವ ಎಚ್ಚರಿಕೆಗಳು ಸಮಾಜ ವಿಮರ್ಶೆಯ ಹಿನ್ನೆಲೆಯಲ್ಲಿ ಬಂದ ಎಚ್ಚರಿಕೆಗಳಾಗಿದ್ದು, ಅವು ವಿಶ್ವದ ಬದುಕಿಗರಿಗೆ ಸದಾ ಸ್ಮರಣೆಯಲ್ಲಿಟ್ಟುಕೊಳ್ಳಬೇಕಾದ ಸೂತ್ರಗಳಾಗಿವೆ.

ಪರರು ಮಾಡಿದ ಪಾತಕವ
ನಾಲಗೆಯಾಳುಚ್ಚರಿಸದಿರೆಚ್ಚರಿಕೆ
ಗುರು ಹಿರಿಯರಸೇವೆ ಮಾಡದೆ
ಉದರವ ಪೊರೆಯದಿರೆಚ್ಚರಿಕೆ
ನಾನೆಂಬ ಅಹಂಕಾರ ಮಾಡಿ
ನರಕದೊಳಿಳಿಯದಿರೆಚ್ಚರಿಕೆ
ಮಡದಿ ಮಕ್ಕಳೆಂಬ ಕಡುಮೋಹಕೆ
ಸಿಲುಕಿ ಕೆಡಬೇಡವೆಚ್ಚರಿಕೆ
ನಡೆವಾಗ ನುಡಿವಾಗ ಗಿಡವೆಲ್ಲ
ನೆಂಟರು ಕಡೆಗಿಲ್ಲ ಎಚ್ಚರಿಕೆ
ಕೊಡಗೈಯಮಾಡದಿರೆ ಮಡಗಿದ
ಧನ ಸಂಗಡ ಬಾರದೆಚ್ಚರಿಕೆ

ಹರಿದಾಸರು ನೀಡಿರುವ ಈ ಎಚ್ಚರಿಕೆಯ ಸೂತ್ರಗಳಿಂದಾಗಿ ಉತ್ತಮ ಪರಿಸರದ ಸಮಾಜದಲ್ಲಿ ವ್ಯಕ್ತಿಯು ಪರಸ್ಪರಾವಲಂಬನೆಯ ಮಹತಿಯನ್ನರಿತು, ಸಹಕಾರದ ಸಹಬಾಳ್ವೆಗೆ ಇಂಬು ನೀಡಲು ಸಾಧ್ಯವಾಗುತ್ತದೆ. ಮತ್ತು ಆ ವ್ಯಕ್ತಿಗೆ ಮನಮನೆಗಳನ್ನು ಗೆದ್ದು ಮಾರು ಗೆಲಿಯುವ ಕಲೆ ಕರಗತವಾಗುತ್ತದೆ.

ಇತಹ ಮನೋಬಲವನ್ನು ಸ್ಥಾಪಿಸಿಕೊಳ್ಳು ವಾಗ ವ್ಯಕ್ತಿಯು ಸಮಾಜದಲ್ಲಿಯ ಅನಿಷ್ಟಗಳಿಗೆ ಜಾರಿ ಹೋಗಬಾರದೆಂದು ಹರಿದಾಸರು ಹೇಳಿದ್ದು ಜನಪದಕ್ಕೆ ತಲಸ್ಪರ್ಶಿಯಾಗಿ, ಈ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ವಿಶಿಷ್ಟ ಶಕ್ತಿಯಾಗಿ ಪರಿಣಮಿಸಿದೆ. ಇದರಿಂದಾಗಿ ನಿರ್ಮಲ ಪರಿಸರದ ಸಮಾಜದ ಚಲನೆಯ ಆವಿಷ್ಕಾರದಲ್ಲಿ ವ್ಯಕ್ತಿಯು ಸ್ವವಿಮರ್ಶೆಗೆ ತೊಡಗಿ ಸ್ವಾನಂದಿಯಾಗುವ ಅವಕಾಶವನ್ನು ಪಡೆಯುತ್ತಾನೆ. ಇದೇ ಸಾಹಿತ್ಯದ ಗುರಿ. ಇದೇ ಸತ್ಯಾನ್ವೇಷಣೆಯ ಅಂತಿಮ ನೆಲೆ. ಇಲ್ಲಿ ಕಟ್ಟಕಡೆಯಲ್ಲಿ ದೊರೆಯುವುದೇ ಆನಂದ.

ಈ ಬಗೆಯನ್ನು ಸಾಧಿಸುವ ಮಾರ್ಗದಲ್ಲಿ ಪ್ರೇರಣೆಯಾಗಿ ನಿಲ್ಲುವ, ''ನೀಚಮಾನವರಿಗೆ ಸಿರಿಬಂದರೇನು? ಪಾಪಿಬಲ್ಲನೆ ಸುಖದುಃಖದಿಂಗಿತವ । ಕೋಪಿಬಲ್ಲನೆ ದಯಾದಾಕ್ಷಿಣ್ಯವ ।। ಕಾಡಕಪಿಬಲ್ಲುದೇ ಮಾಣಿಕದ ಬೆಲೆಯ? । ಜಾತಿಗೆ ಬಾರದ ವಸ್ತು ಬಹಳಿದ್ದರೇನು? ಹೋತಿನ ಕೊರಳೊಳಗೆ ಮಾಲೆ ಇದ್ದರೇನು? ಹಂಚಿನ ಇದಿರಲಿ ಹಲ್ಲನು ತೆಗೆಯಲು ಮಿಂಚುವ ಕನ್ನಡಿಯಾದೀತೆ ?।। ಬರಿ ನೀರಕಡೆದರಲ್ಲೇನು ಉಂಟು? ಕೀಳು ಮನುಜರ ಸಂಗ ಸಾವಿರ ಕೊಟ್ಟರೂ ಬೇಡ । ನೀತಿವಂತರಿಗೆ ಪರಿನಿಂದೆ ಏಕೆ ?'' ಎಂಬಂತಹ ಹರಿದಾಸರ ವಾಣಿಯಲ್ಲಿ ಲೋಕದರ್ಶನವಿದ್ದು ಸಮಾಜದ ಮೂಲಘಟಕವಾದ ವ್ಯಕ್ತಿಯನ್ನೂ ಆ ಮೂಲಕ ಸಮಾಜವನ್ನೂ ಇಡಿಯಾಗಿ ಸಸಿನೆಗೊಳಿಸುವ ದೈವೀಸ್ಪರ್ಶವಿದೆ. ಆ ಸ್ಪರ್ಶದಲ್ಲಿ ರುವ ಪುಷಾರ್ಥದ ಇರವು ಚಿಲುಮೆಯಾಡಿದೆ.

ಈ ಪುರುಷಾರ್ಥವನ್ನು ಸಾಧಿಸಿಕೊಳ್ಳುವಾಗ ಸದಾಚಾರಗಳಿಂದ ಕೂಡಿದ ಒಂದು ಒಟ್ಟು ಸಮಾಜಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗುತ್ತದೆ. ಆ ಸಮಾಜಧರ್ಮವನ್ನು ಹರಿದಾಸರ ಭಾಷೆಯು ಅಂಗೈನಲ್ಲಿಯಾಗಿಸಿ ಹರಿಯ ನೆಲೆಯಾದ ಆ ನೆಲವನ್ನು ಪಡೆಯಲು ಸುಲಭಗೊಳಿಸಿದೆ. ಆ ಸುಲಭತೆಯಲ್ಲಿ ವ್ಯಕ್ತಿಯ ವಿಕಾಸಕ್ಕೆ ಸಹಜ ಧರ್ಮದ ನೆಲೆಯು ಗಟ್ಟಿಯಾದ ತಳಹದಿಯಾಗಿ ನಿಲ್ಲುತ್ತದೆ. ಹೀಗೆ ವ್ಯಷ್ಟಿವ್ಯಷ್ಟಿಯ ವಿಕಾಸದಿಂದ ಸಮಷ್ಟಿಯ ಜಯ. ಇಂತಹ ಸಮಾಜದ ಸಹಜ ಧರ್ಮದ ಸೂತ್ರಗಳನ್ನು ಹರಿದಾಸರ ಮಾತುಗಳಲ್ಲೇ ಸಂಗ್ರಹಿಸುವುದು ಔಚಿತ್ಯಪೂರ್ಣಯತ್ನ :

ವಿಷವನಿಕ್ಕಿದವಗೆ
ಷಡ್ರಸವನುಣಿಸಲು ಬೇಕು
ದ್ವೇಷ ಮಾಡಿದವನ ಪೋಷಿಸಲು ಬೇಕು
ಪುಸಿಮಾಡಿ ಕೆಡಿಸುವವನ
ಹಾಡಿ ಹರಿಸಲು ಬೇಕು
ಮೋಸಮಾಡುವವನ ಹೆಸರ
ಮಗನಿಗಿಡಬೇಕು ॥ 1 ॥
ಹಿಂದೆ ನಿಂದಿಪರನ್ನು ವಂದಿಸುತಿರಬೇಕು
ಬಂಧನದಲಿಟ್ಟವರ ಬೆರೆಯಬೇಕು
ಕೊಂದವೈರಿಯ ಮನೆಗೆ
ನಡೆದು ಹೋಗಲಿಬೇಕು
ಕುಂದೆಣಿಸುವವರ
ಗೆಳೆತನವ ಮಾಡಬೇಕು ॥ 2 ॥
ಕೊಂಡೊಯ್ದು ಬಡಿಯುವವರ
ಕೊಂಡಾಡುತಿರಬೇಕು
ಕಂಡು ಸಹಿಸದವರ ಕರೆಯಬೇಕು
ಪುಂಡರೀಕಾಕ್ಷ ಶ್ರೀ ಪುರಂದರ ವಿಠ್ಠಲನ
ಕೊಂಡಾಡಿ ಧನ್ಯನಾಗಬೇಕು ॥ 3 ॥
- ಇವೇ ಆ ಮಾತುಗಳು.

'ಈ ಮಾತುಗಳನ್ನು ಸ್ವಾನುಭವದ ಹಿನ್ನೆಲೆಯಲ್ಲಿ ಮೇಲುಕುಹಾಕದೊಡಗಿದಾಗ ಹರಿದಾಸರ ಲೋಕಪರಿಜ್ಞಾನ ಹಾಗೂ ಅವರ ಜನತಾದರ್ಶ ದೃಷ್ಟಿಗೆ ತ್ರಿಕರಣಪೂರ್ವಕ ಶರಣೆನ್ನಬೇಕಾಗುತ್ತದೆ. ಅವರ ವಿಸ್ತೃತವಾದ ಲೋಕಾನುಭವದ ನಿಕಷದಲ್ಲಿ ಅರಳಿಸೂಸುವ ಮಾತುಗಳ ಸಂಸ್ಪರ್ಶದಲ್ಲಿ, ಸಮಾಜವನ್ನು ಚಿಕಿತ್ಸೆಗೆ ಒಳಪಡಿಸಿ, ಆದರ್ಶ ಸಮಾಜದ ನಿರಂತರ ಚಲನೆಗೆ ಆವಿಷ್ಕಾರ ಪ್ರಜ್ಞೆಯಿಂದ ತುಂಬಿರುವ ಸಮಾಜ ವಿಮರ್ಶೆಯು ಹಾಡುಪಾಡಾಗಿ, ''ಬದುಕು, ಬದುಕಿಸು'' ತತ್ತ್ವಕ್ಕೆ ಅದೆಲ್ಲ ಸಾಹಿತ್ಯದ ತವನಿಧಿಯಾಗಿರುವುದು ನಿತ್ಯಸತ್ಯ.

# ಯಾಮುನಾಚಾರ್ಯರ ಸ್ತೋತ್ರರತ್ನ

- ಡಾ॥ ವಿ. ಎಸ್. ಸಂಪತ್ಕುಮಾರಾಚಾರ್ಯ.

ದುರಂತಸ್ಯ ಅನಾದೇಃ
ಅಪರಿಹರಣೀಯಸ್ಯ ಮಹತಃ
ನಿಹೀನಾಚಾರಃ ಅಹಂ ನೃಪಶುಃ
ಅಶುಭಸ್ಯ ಆಸ್ಪದಮಪಿ ।
ದಯಾಸಿಂಧೋ! ಬಂಧೋ!
ನಿರವಧಿಕ ವಾತ್ಸಲ್ಯ ಜಲಧೇ!
ತವಸ್ಮಾರಂ ಸ್ಮಾರಂ ಗುಣಗಣಂ
ಇತಿ ಇಚ್ಛಾಮಿ ಗತಭೀಃ ॥ 58 ॥

ದಯಾಸಾಗರನೂ ಆಪದ್ಬಾಂಧವನೂ ಅಪಾರವಾದ ವಾತ್ಸಲ್ಯ ಜಲನಿಧಿಯೂ ಆದ ಸ್ವಾಮಿ! ದುಃಖಕರವಾದ ಪರಿಣಾಮ ಹೊಂದಿರುವುದೂ, ಅನಾದಿಯೂ, ಪರಿಹರಿಸಿಕೊಳ್ಳಲು ಸಾಧ್ಯವಿಲ್ಲದುದೂ ತುಂಬ ಹೆಚ್ಚಾದುದೂ ಆದ ಮಹಾ ಪಾತಕಗಳೆಂಬ ಅಶುಭಕ್ಕೆ ಆಶ್ರಯನಾಗಿರುವ ಕೀಳು ನಡತೆಯುಳ್ಳ ನರಪಶುವಾದ ನಾನು ನಿನ್ನ ಗುಣಗಳ ಸಮೂಹವನ್ನು ನೆನೆ ನೆನೆದು ಭಯವಿಲ್ಲದವನಾಗಿ ಹೀಗೆ ಬಯಸುತ್ತೇನೆ.

ವಿವರಣೆ : ಈ ಶ್ಲೋಕದಲ್ಲಿ ಆಚಾರ್ಯರು ತಮ್ಮ ಪಾಪಫಲಗಳು ಎಂದೂ ಮುಗಿಯುವುದಿಲ್ಲವೆಂದೂ, ಭಗವಂತನ ಕೃಪೆಯನ್ನು ಮಾತ್ರ ಅವಲಂಬಿಸಿರುವುದಾಗಿ ಪ್ರಾರ್ಥಿಸಿದ್ದಾರೆ.

ದುರಂತಸ್ಯ - ಹೇಯವಾದ ಸಂಸಾರಸಂಬಂಧವು ಕೊನೆಗಾಣುವುದಿಲ್ಲ (ಇದೇ ದುರಂತ) ಅನಾದೇ: - ಈ ಕರ್ಮ ಮತ್ತು ಅದರ ಫಲ ಯಾವಾಗ ಆರಂಭವಾಯಿತು ಎಂದು ಹೇಳಲಾಗುವುದಿಲ್ಲ. ತತ್ಕಾರಣ ಅದು ಔಪಾಧಿಕವಾದರೂ ಅನಾದಿ. (The spiritual link is without a beginning and always a torture in life) ಅಪರಿಹರಣೀಯಸ್ಯ - ಚೇತನನ ಯತ್ನದಿಂದಲೇ ಇದನ್ನು ಬಿಡಿಸಿಕೊಳ್ಳಲಾಗುವುದಿಲ್ಲ. ಮಹತಃ - ಇದು ನಾನಾ ರೀತಿಯಲ್ಲಿ ಕಾಣಿಸಿಕೊಂಡು ಭೋಗದೃಷ್ಟಿಯಿಂದ ಆಕರ್ಷಿಸಿ ರೋಗಫಲವನ್ನು ನೀಡುತ್ತದೆ. ಇದೇ ವ್ಯಭಿಚರಿತ ದರ್ಶನ. ಲೌಕಿಕನು ಈ ಸನ್ನಿವೇಶದಲ್ಲಿ ಸಿಕ್ಕಿಕೊಂಡಿರುವುದರಿಂದ ನಿಹೀನಾಚಾರಃ - ನೀಚ ವ್ಯವಹಾರಕ್ಕೆ - ನಡತೆಗೆ ತುತ್ತಾಗಬೇಕಾಯಿತು. ಮನ ಬಂದಂತೆ ನಡೆಯುವುದೇ ಅತ್ಯಂತ ನಿಕೃಷ್ಟಾಚಾರ. ಅಹಂ - ನಾನು ಇಂತಹವನು. ನನ್ನನ್ನು ಬಿಟ್ಟರೆ ಬೇರೊಬ್ಬನಿಲ್ಲ ಎಂದು ಆಚಾರ್ಯರು ನೈಚ್ಯಾನುಸಂಧಾನ ಭಾವದಿಂದ ಕೂಡಿ ತಮ್ಮನ್ನು ತಾವು ಹಳಿದುಕೊಂಡಿದ್ದಾರೆ. ನೃಪಶುಃ - ಜ್ಞಾನದ ಫಲವನ್ನು ಕಾಣದೆ ಅಚೇತನನಂತೆ ಕೇವಲ ಶರೀರ ಪೋಷಣೆಯಲ್ಲಿಯೇ ತೊಡಗಿರುವ ಪಶುವಾಗಿದ್ದೇನೆ. (human animal) ಎಂದರೆ ಸಹಜ ಧರ್ಮವಾದ ಜ್ಞಾನಕ್ಕೆ ಉಜ್ಜೀವನಾಂಶದಲ್ಲಿ ಉಪಯೋಗವಿಲ್ಲದ ಗುರಿಯಿಲ್ಲದ ಜೀವನ. ಆದ್ದರಿಂದ ಅಶುಭಸ್ಯ ಆಸ್ಪದಂ - ಸಕಲವಿಧವಾದ ಅಪಾಯಕ್ಕೂ ತುತ್ತಾಗಿರುತ್ತೇನೆ. ಇದು ಭಗವಂತನ ಸಂಗಜ್ಞಾನವಿಲ್ಲದ ಚೇತನನಿಗೆ ಬಿಡಿಸಿ ಕೊಳ್ಳಲಾಗದೆ ಇರುವ ಸಹವಾಸಫಲ.

ದಯಾಸಿಂಧೋ - ಬಂಧೋ - ನೀನು ನನಗೆ ಬಂಧು. ಉತ್ಪತ್ತಿಯಲ್ಲಿಯೇ ನಿನ್ನವನಾಗಿದ್ದೇನೆ. ನಿನ್ನ ಒಡವೆಯಾದುದರಿಂದ ನೀನೇ ನನ್ನನ್ನು ಉಳಿಸಿಕೊಳ್ಳಬೇಕು. ನನ್ನ



ಗುಣಗಳೆಲ್ಲ ನಿನ್ನ ಕೃಪೆಯ ಕೊಡುಗೆ. ಇದಕ್ಕೆ ಬಾಂಧವ್ಯವೇ ಕಾರಣ. ತಮ್ಮ ದೋಷಗಳಿಗೆ ಪರಿಹಾರ ಅವನಲ್ಲಿಯೇ ಇದೆ ಎಂಬ ದೃಢವಿಶ್ವಾಸದಿಂದ ಆಚಾರ್ಯರು ಅವನನ್ನು ದಯಾಸಾಗರನೆಂದು ಸಂಬೋಧಿಸಿದ್ದಾರೆ. ಚೇತನನಿಗೆ ಅನರ್ಥ ಸಂಭವಿಸಿದುದು ಸರ್ವರಕ್ಷಕನಲ್ಲಿ ಔದಾಸೀನ್ಯ ಸೇರಿಕೊಂಡದ್ದರಿಂದ ಅದೇ ಅಗಲಿಕೆ. ಸ್ವಲೋಪವನ್ನು ಹೋಗಲಾಡಿಸಿಕೊಳ್ಳಲು ರಕ್ಷಕತ್ವವನ್ನು ಬಳಸಬೇಕು. ಹಾಗಾದರೆ ಚೇತನನಲ್ಲಿ ಮೂಡಿರುವ ದುಃಖ ನಿರ್ನಾಮ ವಾಗುತ್ತದೆ. ಇದು ವೈದಿಕ ಭಾವನೆ. ದಯೆಗೆ ಕಾರಣ ಬಾಂಧವ್ಯ. ನಿರವಧಿಕ ವಾತ್ಸಲ್ಯ ಜಲಧೇ

ಭಗವಂತನು ಎಲ್ಲೆ ಇಲ್ಲದ ಗುಣಗಳಿಗೆ ಸಮುದ್ರಪ್ರಾಯನಾದವನು. ವಾತ್ಸಲ್ಯ ವೆಂದರೆ ವತ್ಸನಲ್ಲಿ ತಾಯಿಗೆ ಇರುವ ಮಮತೆ. ದೋಷವನ್ನು ಕಾಣದೆ ಗುಣವನ್ನು ಮಾತ್ರವೇ ಕಂಡು ಬಾಂಧವ್ಯವನ್ನು ಉಳಿಸಿಕೊಳ್ಳುವಿಕೆ. ವೈದಿಕ ದೃಷ್ಟಿಯಲ್ಲಿ ಆ ದೋಷವನ್ನೇ ಭೋಗಕ್ಕೆ ಉಳಿಸಿಕೊಳ್ಳುವುದು - ದುರುಪಯೋಗ ಹೇಯ - ಸದುಪಯೋಗವು ಗುಣ. ತ್ಯಾಗರಾಜಸ್ವಾಮಿಯು ಶ್ರೀರಾಮನನ್ನು 'ಕರುಣಸಾಗರನೇ ಗುಣ ನಿಧಿಯೇ' ಎಂದು ಸಂಬೋಧಿಸಿರುವ ದೇವಗಾಂಧಾರಿರಾಗದ ಕೃತಿಯನ್ನು ಇದು ನೆನಪಿಗೆ ತರುತ್ತದೆ.

ತವಸ್ಮಾರಂ ಸ್ಮಾರಂ ಗುಣ ಗಣಂ - ನಿನ್ನ ಅನಂತಗುಣಗಳು ನನ್ನ ನಿಮಿತ್ತವಾಗಿ ಪ್ರಕಾಶವಾಗಿರುವುದನ್ನು ನೆನೆದಾಗಲೆಲ್ಲ, ಗತಭೀಃ - ಅನಿಷ್ಟ ಜ್ಞಾನದ ಸುಳಿಗೆ ಸಿಕ್ಕಬೇಕಾಯಿತಲ್ಲ ಎಂಬ ಭಯ ತೊಲಗಿ ನನ್ನ ವಿಷಯವಾಗಿ ಕೊಂಚವೂ ಅಪನಂಬಿಕೆ ಉಳಿಯದಂತೆ ಇರಲು ಇಚ್ಛಾಮಿ - ಆಸೆ ಪಡುತ್ತೇನೆ - ಎಂದು ಆಚಾರ್ಯರು ಪ್ರಾರ್ಥಿಸಿ ತಮ್ಮ ಆಸೆಯನ್ನು ಪ್ರಕಟಿಸಿದ್ದಾರೆ.

ಇದರ ರಹಸ್ಯ ಹೀಗಿದೆ - ನನ್ನ ಮೆದುಳಿಗೆ ಯಜಮಾನ ನೀನು. ನನ್ನ ನಡತೆಗೆ ಆಶ್ರಯ ನಿನ್ನಪಾದ. ಗಂಗೆಗೆ ಏರ್ಪಟ್ಟಿರುವ ಹಿರಿಮೆ ವಿಷ್ಣುಪಾದೋದ್ಭವೆ ಎಂಬ ಕಾರಣದಿಂದ. ಅದು ಒದಗಲು ಕಾರಣ ಶ್ರೀ ಸಂಬಂಧ. ಇದನ್ನು ಶ್ರೀಪಾದ ತೀರ್ಥವೆಂದು ಭಾವಿಸಲಾಗಿದೆ. ಶ್ರೀ ದೇವಿಯ ಕೈವಾಡದಿಂದ ಸರ್ವೋತ್ತಮನಾದ ವಿಷ್ಣುವಿನ ಪಾದತೀರ್ಥ ದರ್ಶನ - ಶುದ್ಧವಾದ ನಡವಳಿಕೆ ಇವೆರಡೂ ಲಭಿಸುವುದರಿಂದ ಗತಭೀಃ - ನನ್ನಲ್ಲಿ ಏನೂ ಭಯವಿಲ್ಲ. ಈ ರೀತಿಯನ್ನು ನೋಟ ನಡತೆಯಲ್ಲಿ ಬಹಳವಾಗಿ ಅಪೇಕ್ಷಿಸುತ್ತೇನೆ -ಎಂದು ಆಚಾರ್ಯರು ತಮ್ಮ ಉತ್ಕಟಾಪೇಕ್ಷೆಯನ್ನು ವ್ಯಕ್ತಪಡಿಸಿದ್ದಾರೆ.

**ಅನಿಚ್ಛನ್ ಅಪಿ ಏವಂ**
**ಯದಿ ಪುನರಿತಿ ಇಚ್ಛನ್ ಇವ ರಜಸ್**
**ತಮಶ್ಛನ್ನಃ ಛದ್ಮಸ್ತುತಿ**
**ವಚನಭಂಗೀ ಅರಚಯಂ**
**ತಥಾಪಿ ಇತ್ಥರೂಪಂ**
**ವಚನಂ ಅವಲಂಬ್ಯಾಪಿ ಕೃಪಯಾ**

**ತ್ವಮೇವ ಏವಂ ಭೂತಂ**
**ಧರಣಿಧರ ಮೇ ಶಿಕ್ಷಯ ಮನಃ ॥ 59 ॥**

ಒಂದು ವೇಳೆ ನಾನು ಮೇಲೆ ಹೇಳಿದಂತೆ ಅಪೇಕ್ಷೆ ಪಡೆದಿದ್ದರೂ ಅಥವಾ ರಜಸ್ತಮೋ ಗುಣಗಳಿಂದ ಆವೃತನಾಗಿ ಹಾಗೆ ಅಪೇಕ್ಷಿಸುತ್ತಿರುವವನಂತೆ ಕಪಟವಾದ ಸ್ತುತಿವಚನಗಳ ಸರಣಿಯನ್ನು ರಚಿಸಿರುವೆ ನಾದರೂ, ಈ ರೀತಿಯಾದ ಮಾತನ್ನೇ ಅವಲಂಬಿಸಿ ಭೂಮಿಯನ್ನು ಉದ್ಧರಿಸಿದ ಸ್ವಾಮಿಯೇ ಕೃಪೆಯಿಂದ ನೀನೇ ನನ್ನ ಈ ಬಗೆಯ ಅಶಿಕ್ಷಿತವಾದ ಮನಸ್ಸನ್ನು ಸನ್ಮಾರ್ಗಕ್ಕೆ ತಿರುಗುವಂತೆ ಶಿಕ್ಷಿಸು.

ವಿವರಣೆ : ಈ ಶ್ಲೋಕದಲ್ಲಿ ಆಚಾರ್ಯರು ತಮ್ಮ ಪ್ರತಿಭೆಯನ್ನು ನಂಬಲಿಲ್ಲ. ಜ್ಞಾನಾನ್ ಮೋಕ್ಷಃ ಎಂಬುದು ಸ್ಥಿರಮಾರ್ಗವಾದರೂ ಈ ಜ್ಞಾನವು ಕೇವಲ ಚೇತನನ ಯತ್ನದಿಂದಲೇ ಲಭ್ಯವಾಗದು ಚೇತನನ ಪ್ರಯತ್ನ ಈಶ್ವರ ಅನುಗ್ರಹವಿಲ್ಲದಿದ್ದರೆ ಅಸಂಕಲ್ಪಃ - ಆಚಾರ್ಯರು ಇದನ್ನು ಮನಗಂಡು ಎಲ್ಲವೂ ಭಗವದನುಗ್ರಹ ಕಾರ್ಯರೂಪವಾದುದರಿಂದ ಜ್ಞಾನ ಪ್ರಾಪ್ತಿಯ ಜೀವಾತ್ಮನಿಗೆ ಸಹಜವಾದುದಾದರೂ, ತೇನ ವಿನಾ ಎಂಬ ನ್ಯಾಯದಿಂದ ಈಶ್ವರ ಸಂಕಲ್ಪವಿಲ್ಲದೆ ಯಾವ ಚಲನ ವಲನೆಯೂ ಅನುವಾಗುವುದಿಲ್ಲ. ಈ ವಿಷಯವನ್ನು ದಾಸಶ್ರೇಷ್ಠ ಪುರಂದರದಾಸರು 'ಹರಿಚಿತ್ತ ಸತ್ಯ ನರಚಿತ್ತಕ್ಕೆ ಬಂದುದು ಲವಲೇಶನಡೆಯದು' - ಎಂಬ ದೇವರನಾಮದಲ್ಲಿ ತತ್ವವನ್ನು ಸುಂದರವಾಗಿ ವಿವರಿಸಿದ್ದಾರೆ. ಉಪನಿಷತ್ತಿನ ನಾಯಮಾತ್ಮಾ - ಇತ್ಯಾದಿಯಿಂದ ತಿಳಿದು ಬರುವುದೇನೆಂದರೆ ಚೇತನನು ಜ್ಞಾನಿ ಎಂಬ ದುರ್ಭಾವನೆಯಿಂದ ತಾನು ತಾನು ತಿಳಿದುಕೊಳ್ಳ ಬಲ್ಲೆನು ಎಂದು ಗರ್ವಪಟ್ಟರೆ ತತ್ರಾಪಿ ಭಗವಂತನ ವಿಷಯದಲ್ಲಿ ಈ ಜ್ಞಾನವನ್ನು ತಿರುಗಿಸಿದರೆ ಚೇತನನ ಪ್ರಯತ್ನ ನಿಷ್ಫಲ. ಇದರ ಮರ್ಮ ಈಶ್ವರನನ್ನು ಅವನ ಸಹಾಯವಿಲ್ಲದೆ ಯಾವ ಪದಾರ್ಥವೂ ಪರಿಚ್ಛೇದಿಸಲಾಗದು ''ಯಮೇವ ಏಷ ವೃಣುತೇ ತೇನ ಲಭ್ಯಃ'' - ಇದು ಕಠೋಪನಿಷತ್ತಿನ ಮಾತು. ಸರ್ವ ಪ್ರಕಾರದಲ್ಲಿಯೂ, ಅಗೋಚರನಾದ ಪರಮಾತ್ಮನು ಕೇವಲ ಪರ ಪ್ರಯತ್ನದಿಂದ ಗೋಚರನಾಗುವುದಿಲ್ಲ. ಅಂದಮೇಲೆ ಅವನ ಆದಿಸಂಕಲ್ಪದಿಂದ ಪ್ರತಿಯೊಂದು ಪದಾರ್ಥಕ್ಕೂ ಶಕ್ತಿ ಏರ್ಪಟ್ಟು ನಡೆಯಬೇಕಾದ ಕಾರ್ಯಕ್ಕೆ ಅವಕಾಶವಾಗುತ್ತದೆ. ಯಾವನನ್ನು ವಿಶೇಷವಾಗಿ ಅನುಗ್ರಹಿಸಬೇಕೆಂದಿರುವನೋ ಅಂತಹ ಭಾಗ್ಯಶಾಲಿಯಾದವನಿಗೆ ಅವನು ಗೋಚರವಾಗುತ್ತಾನೆ. ಭಗವತ್ ಗೋಚರತೆಯು ಭಗವತ್ ಸಂಕಲ್ಪಾಧೀನ.

ಆಚಾರ್ಯರು ತಮ್ಮ ಬೇಡಿಕೆಗಳಲ್ಲಿ ಒಂದಂಶವನ್ನು ಸೇರಿಸಿದ್ದಾರೆ. ಅವನನ್ನು ನೋಡಿ ಅವನ ಗುಣಗಳನ್ನು ಅನುಭವಿಸಲಾಗುವುದಿಲ್ಲ. ಇದು ಸಫಲವಾಗಲು ಈಶ್ವರನೇ ಹೊಣೆ ಹೊರಬೇಕಾಗುತ್ತದೆ. ಆದ್ದರಿಂದ ತಮ್ಮ ಕೃತಿಗಳಿಗೆ ಪ್ರಮಾಣ ಒದಗಲು ಭಗವಂತನ ಕೈವಾಡ ಅಧಿಕ ಕಾರಣ. ಅದನ್ನವನು ಒದಗಿಸಿದರೆ ಏರ್ಪಡುವುದೆಲ್ಲ ಪರಿಶುದ್ಧವೂ ಪವಿತ್ರವೂ ಆಗಿರುತ್ತದೆ. ಇದನ್ನು ತಮಗೂ ಅನ್ವಯಿಸಿಕೊಂಡು ಈ ಭಾಗವನ್ನು ತನಗೂ ಕರುಣಿಸಬೇಕೆನ್ನುತ್ತಾರೆ. ಆದ್ದರಿಂದ ವರ್ಣಿಸಿ ಅನುಭವಿಸಲು ಯೋಗ್ಯತೆ ಮತ್ತು ಉಚಿತ ಶಬ್ದಗಳನ್ನು ಅವನೇ ಕರುಣಿಸಬೇಕೆಂದಿದ್ದಾರೆ. ತನ್ನ ಬಾಯಿಂದ ಹೊರಡುವ ನುಡಿ ಅವನದು ಎಂಬ ಭಾವನೆ ಏರ್ಪಡಬೇಕು. ದಿವ್ಯಸೂರಿಗಳು ನುಡಿವಂತೆ - ತಂ ಶೊಲ್ಲಾಲ್ ತಾಂ ತನ್ನೆ

ಕೀರ್ತಿತಮಾವನ್ - ಚೇತನನನ್ನು ಭಗವಂತನು ಕವಿಯಾಗಿಸುತ್ತಾನೆ. ಅಂದಮೇಲೆ ಸರ್ವವೂ ಸಾಕ್ಷಾತ್ ಅಥವಾ ಪರೋಕ್ಷವಾಗಿ ಅವನ ಕೃತ್ಯ. ಅವನು ಶರೀರ ರೂಪವಾದ ಆತ್ಮನಲ್ಲಿ ಸೇರಿಕೊಂಡು ಜಗತ್ತಿಗೆ ಬೆಳಕನ್ನು ಕೊಡುತ್ತಾನೆ. ಇದು ವೇದೋಪದೇಶಕ್ಕಿಂತಲೂ ಮಿಗಿಲಾದುದು. ಚೇತನನ್ನು ತನ್ನ ಶರೀರವನ್ನಾಗಿ ಭಾವಿಸಿ ತಾನು ಆತ್ಮಾನಾಗಿ ತನ್ನ ಸ್ವರೂಪವನ್ನು ಪ್ರಕಟಪಡಿಸುವುದು ಇದರಲ್ಲಿ ವೇದ್ಯವಾಗುತ್ತದೆ. ಭಗವಂತನೇ ಪ್ರವರ್ತಕ, ಚೇತನನು ಅವನ ಕೈಗೊಂಬೆ ಎಂಬ ಭಾವನೆ ಆಚಾರ್ಯರಲ್ಲಿ ಪೂರ್ಣವಾಗಿರುವುದರಿಂದ ತಮ್ಮ ಮೂಲಕ ಹೊರಟ ಶಬ್ದಾರ್ಥ ಅವನದು ಎಂದು ಆಗಬೇಕು - ಇದು ಅವರಬೇಡಿಕೆ. ಸರ್ವಂ ಖಲ್ವಿದಂ ಬ್ರಹ್ಮ ಎಂಬಲ್ಲಿ ಸರ್ವಶಬ್ದಕ್ಕೆ ಅಸಂಕೋಚವಾಗಿ ಅರ್ಥವಾಗಿ ಕೈವಾಡವೆಲ್ಲ ಅವನದು ಎಂದು ಸ್ಥಿರಪಡುತ್ತದೆ. ಈ ಶ್ಲೋಕದಲ್ಲಿ ಭಾವಶುದ್ಧಿ ಶಬ್ದಶುದ್ಧಿಎರಡೂ ಭಗವಂತನ ಅನುಗ್ರಹವಾಗಿ ತನ್ನಲ್ಲಿ ಉಳಿದುಕೊಳ್ಳಬೇಕೆಂದು ಪ್ರಾರ್ಥಿಸಿ ತಮ್ಮ ನಿಲುವನ್ನು ಸೂಚಿಸುತ್ತ ಅವನ ಶರೀರದಲ್ಲಿ ಮಾಲಿನ್ಯಕ್ಕೆ ಎಡೆಕೊಡಕೂಡದು ಎಂದು ಚೇತನನಾದುದರಿಂದ ಅವನಲ್ಲಿ ಮೊರೆ ಯಿಡುತ್ತಾರೆ. ತತ್ಫಲವಾಗಿ ಇವರ ಕೃತಿಯು ಸ್ತೋತ್ರರತ್ನ.

**ಪಿತಾ ತ್ವಂ ಮಾತಾತ್ವಂ ದಯಿತ**
**ತನಯಃ ತ್ವಂ ಪ್ರಿಯ ಸುಹೃತ್**
**ತ್ವಮೇವ ತ್ವಂ ಮಿತ್ರಂ ಗುರುರಸಿ**
**ಗತಿಶ್ಚಾಸಿ ಜಗತಾಂ ।**
**ತ್ವದೀಯಃ ತ್ವದ್ ಭೃತ್ಯಃ**
**ತವ ಪರಿಜನಃ ತ್ವದ್‌ಗತಿಃ ಅಹಂ**
**ಪ್ರಪನ್ನಶ್ಚ ಏವಂ ಸತಿ**
**ಅಹಮಪಿ ತವೈವ ಅಸ್ಮಿಹಿ ಭರಃ ॥ 60 ॥**

ಎಲ್ಲ ಲೋಕಗಳಿಗೂ ತಂದೆ ನೀನೆ; ತಾಯಿ ನೀನೆ. ಪ್ರಿಯ ಪುತ್ರನೂ ನೀನೆ; ಪ್ರೀತಿಯ ಗೆಳೆಯನೂ ನೀನೆ. ಮಿತ್ರನೂ ನೀನೆ. ನೀನೇ ಗುರುವಾಗಿದ್ದೀಯೆ. ದಿಕ್ಕಾಗಿ ಇದ್ದೀಯ. ನಾನು ನಿನಗೆ ಸೇರಿದವನು, ನಿನ್ನ ಸೇವಕ. ನಿನ್ನ ಪರಿವಾರದವನು, ನಿನ್ನನ್ನೇ ದಿಕ್ಕಾಗಿ ಉಳ್ಳವನು. ಮತ್ತು ನಿನ್ನಲ್ಲಿ ಶರಣಾಗತಿ ಮಾಡಿಕೊಂಡಿರುವವನು. ಹೀಗಿರುವಾಗ ನಾನು ಕೂಡ ನಿನಗೆ ರಕ್ಷಿಸಲ್ಪಡಬೇಕಾದ ಹೊರೆಯಾಗಿದ್ದೇನೆ.

ವಿವರಣೆ : ಈಶ್ವರನು ಜನಕ ಅವನೇ ಸಲಹುವ ವ್ಯಕ್ತಿ. ಅಭಿಮಾನದಿಂದ ಅವನೇ ಇನಿಯಾದ ಮಗುವಿನಂತೆ ಸಕಲ ಬಗೆಯ ಆಸೆಗಳನ್ನು ಕಾರ್ಯಗತಗೊಳಿಸುವ ವಿಧೇಯ ಪುತ್ರ. ಇದು ಕೇವಲ ಸಂಬಂಧದಿಂದ ಪಡೆಯುವ ಕೆಲಸವಲ್ಲ. ಅತಿಪ್ರೀತಿಯಿಂದ ಸ್ನೇಹಿತನೊಬ್ಬನು ಶುಭವನ್ನು ಬಯಸಿ ಒದಗಿಸುವುದು. ಸ್ನೇಹಿತನು ಶುದ್ಧ ಮನಸ್ಕನಾದವನು. ಬಾಳಿನಲ್ಲಿ ಸಂಕೋಚ ಏರ್ಪಡಕೂಡದು ಎಂಬ ಭಾವನೆಯಿಂದ

ಒಡನಾಡಿಯಾಗಿರುವನು. ಅಜ್ಞಾನ ನಾಶಕನಾದ ಭಾಸ್ಕರನಿಂದ ವಸ್ತುವಿನ ಸ್ವರೂಪವನ್ನು ಉಳಿಸಿ ಅಭಿವೃದ್ಧಿ ಮಾಡುವ ವ್ಯಕ್ತಿ. ಇದು ಸಾರ್ವತ್ರಿಕ. ಆದ್ದರಿಂದ ಸರ್ವೇಶ್ವರತ್ವ ಭಗವಂತನ ಲಕ್ಷಣ. ತನ್ನ ವಶದಲ್ಲಿರುವ ಒಂದು ವಸ್ತುವನ್ನು ಅಧೋಗತಿಗೆ ಬಿಟ್ಟುಕೊಡುವ ಔದಾಸೀನ್ಯವಿಲ್ಲ. ಅವುಗಳಿಗೆ ಸರ್ವತೋಮುಖವಾದ ಮಾರ್ಗದರ್ಶಿ ಈಶ್ವರನೇ. ಪಕ್ಷಪಾತವಿಲ್ಲ. ದೇಶಕಾಲಯೋಗದಲ್ಲಿ ವೈಷಮ್ಯ ತೋರಿದರೂ ಸಂಕಲ್ಪ ಸಾರ್ವತ್ರಿಕ. ಈ ವೈಷಮ್ಯ ತತ್ಕಾಲಿಕ. ಇದು ಪರಬ್ರಹ್ಮನ ಸ್ವಭಾವ. ಅವನನ್ನು ಮರೆತರೆ ಚೇತನನಿಗೆ ಗತಿಯೇ ಇಲ್ಲ. ಆದ ಕಾರಣ ಈ ಶ್ಲೋಕದ ಪೂರ್ವಾರ್ಧ ಭಗವಂತನ ಸರ್ವೇಶ್ವರತ್ವವನ್ನು ಸ್ಥಾಪಿಸುತ್ತದೆ. ಈಶ್ವರನೆಂದರೆ ನಿಯಾಮಕ, ಒಡೆಯ, ಸಿರಿ, ಭಗವತ್ ವಶದಲ್ಲಿರುವ ಅವನ ಸಿರಿತನ. ಇದೇ ವಿಭೂತಿ. ಈ ಜ್ಞಾನ ಏರ್ಪಟ್ಟ ಮೇಲೆ ಚೇತನನಿಗೆ ತನ್ನ ಸ್ವರೂಪಜ್ಞಾನ ಉಂಟಾಗುತ್ತದೆ. ತನ್ನ ಮನಸ್ಸನ್ನು ಭಗವಂತನೇ ತಿದ್ದಬೇಕು ಎಂಬುದಕ್ಕೆ ಸಾಮಾನ್ಯ ಹಾಗೂ ವಿಶೇಷ ಕಾರಣಗಳನ್ನು ಆಚಾರ್ಯರು ಈ ಶ್ಲೋಕದಲ್ಲಿ ನೀಡಿದ್ದಾರೆ.

ತದೀಯ - ಮೊಟ್ಟಮೊದಲು ಈಶ್ವರನ ಸಂಬಂಧವನ್ನಿಟ್ಟುಕೊಳ್ಳುವುದಾಗಿದೆ. ತ್ವದ್ಭೃತ್ಯ - ಈಶ್ವರನ ಸೇವೆಗಾಗಿ ಚೇತನನಲ್ಲಿ ಇರಬೇಕಾದ ಸಾಮಗ್ರಿ. ಇಲ್ಲಿಸ್ವಪ್ರಯೋಜನ ಪ್ರಧಾನವಲ್ಲ. ತವಪರಿಜನಃ - ಈಶ್ವರನ ಸೇವೆಗಾಗಿ ಎಡೆಬಿಡದೆ ಸದಾ ಶುಶ್ರೂಷೆಗೆ ಕಾದು ಸಿದ್ಧವಾಗಿರುವ ಸೇವಕ ತ್ವದ್ಗತಿಃ - ಚೇತನನ ಅಸ್ತಿತ್ವದಿಂದ ಮೊದಲುಗೊಂಡು ಸಕಲವೂ ಈಶ್ವರನ ವಶದಲ್ಲಿದ್ದು ಅವನ ಸಂಕಲ್ಪಾನುಗುಣವಾಗಿ ಪ್ರಕಾಶಗೊಳ್ಳುವ ಸನ್ನಿವೇಶ. ಇದರಲ್ಲಿ ಸ್ವಸಂಕಲ್ಪ ಸ್ವಾರ್ಥ ವ್ಯವಹಾರಕ್ಕೆ ಲವಲೇಶವೂ ಅವಕಾಶವಿಲ್ಲ. ಅಂದಮೇಲೆ ಚೇತನನ ವಿಷಯವಾದ ಯೋಗಕ್ಷೇಮ ಈಶ್ವರನದು. ಆ ಹೊಣೆಗಾರಿಕೆಯನ್ನು ಅವನು ಕೈಬಿಟ್ಟರೆ ಯಾವುದೂ ಉಳಿಯಲಾರದು. ವೇದಾಂತದಲ್ಲಿ ಸ್ವಯೋಗಕ್ಷೇಮದಲ್ಲಿ ಸ್ವಕೀಯವಾದ ಕೈವಾಡಕ್ಕೆ ಅವಕಾಶವಿಲ್ಲ. ಜಗತ್ತಿನ ವ್ಯಾಪಾರವೆಲ್ಲ ಅವನ ವ್ಯಾಪಾರವೇ. ಜಗತ್ತಿನಲ್ಲಿ ತೋರಿಬರುವ ವಿವಿಧ ವೈಷಮ್ಯಗಳು ಜಗತ್ತಿನ ವ್ಯಾಪಾರದ ವೈಶಿಷ್ಟ್ಯ ಪ್ರಕಾಶಕ. ಇದನ್ನು ತಿಳಿದವರು ಕರ್ಮದ ಫಲವೆಂದು ಅರ್ಥೈಸುತ್ತಾರೆ. ಆದ್ದರಿಂದ ತಜ್ಜಲಾಂ ಎಂದು ಶ್ರುತಿಯಲ್ಲಿ ನುಡಿದಿರುವಂತೆ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ ಇತ್ಯಾದಿ ಸಮಸ್ತ ವ್ಯಾಪಾರವೂ ಅವನಿಗೆ ಮೀಸಲಾದುದು.

ಅಹಮಪಿ ತವೈವಾಸ್ಮಿ ಹಿ ಭರಃ - ಈಶ್ವರನಾದ ನೀನು ನನ್ನನ್ನು ನಿನಗಾಗಿಯೇ ಪೂರ್ಣವಾಗಿ ಬಳಸುವುದು. ತದಂಗವಾಗಿ ನನ್ನ ಯೋಗಕ್ಷೇಮ ವಹಿಸುವುದು ನಿನಗೆ ಮೀಸಲಾದ ಹೊಣೆ - ಎಂದು ಆಚಾರ್ಯರು ಪ್ರಾರ್ಥಿಸಿ ಬೇಡಿದ್ದಾರೆ. ಇದೇ ಭರನ್ಯಾಸ. ಚೇತನನ ತತ್ವಜ್ಞಾನ ಅರಿತ ಮೇಲೆ ತನ್ನದಲ್ಲವೆಂದರಿತು ಈಶ್ವರನಲ್ಲಿ ಆ ಭಾವನೆಯನ್ನು ಅರ್ಪಿಸಿ ಅವನ ಪ್ರಯೋಜನಕ್ಕೆ ಅವನ ಇಚ್ಛಾನುಸಾರ ಕ್ಷಣಮಾತ್ರ ವಿಚ್ಛೇದವಿಲ್ಲದೆ ಉಪಯೋಗಕ್ಕೆ ಏರ್ಪಟ್ಟ ಜ್ಞಾನ ಸ್ವರೂಪಿಯಾದ ಅನೀಶ್ವರ ಚೇತನ ವ್ಯಕ್ತಿ. ಯಾಮುನಾಚಾರ್ಯರು ಕೈಂಕರ್ಯಾನ್ವಯವೇ ಬಾಳು ಎಂದು ತವೈವ ಭರಃ - ನಿನ್ನ ವಶದಲ್ಲಿಟ್ಟುಕೊಂಡು ಬಳಸುವ ರೀತಿಯಲ್ಲಿ ಕೈವಾಡ ಭಗವಂತನಿಗೇ ಮೀಸಲಾಗಿರುವುದು ಎಂದಿದ್ದಾರೆ. ಭಗವಂತನಿಗೆ ತಾನು ಶೇಷ. ದೇಹ ಉಳಿಸಿಕೊಳ್ಳುವುದು ದೇಹಿಯಾದ ಆತ್ಮನ ಕರ್ತವ್ಯ. ಅವನ ಬಳಕೆಗೆ ಇರಬೇಕಾದುದು ದೇಹದ ಕರ್ತವ್ಯ - ಲಕ್ಷಣ. ಅವರ ಭಾವನೆಯಲ್ಲಿ ಚೇತನ ಅಚೇತನಗಳ ಆಗು ಹೋಗುಗಳೆಲ್ಲ ಕೇವಲ ಈಶ್ವರನಿಗೆ ಸಂಬಂಧಿಸಿದುದು. ಇದನ್ನು

ಮರೆಯುವುದು ಆತ್ಮಾಪಹಾರವಾಗುತ್ತದೆ ಎಂದು ಆಚಾರ್ಯರು ನಿರೂಪಿಸಿದ್ದಾರೆ.

**ಜನಿತ್ವಾಹಂ ವಂಶೇ**
**ಮಹತಿ ಜಗತಿ ಖ್ಯಾತ ಯಶಸಾಂ**
**ಶುಚೀನಾಂ ಯುಕ್ತಾನಾಂ**
**ಗುಣಪುರುಷ ತತ್ವಸ್ಥಿತಿ ವಿದಾಂ ।**
**ನಿಸರ್ಗಾದೇವ ತ್ವಚ್ಚರಣ ಕಮಲ**
**ಏಕಾಂತ ಮನಸಾಂ**
**ಅಧೋಧಃ ಪಾಪಾತ್ಮಾ ಶರಣದ!**
**ನಿಮಜ್ಜಾಮಿ ತಮಸಿ ॥ 61 ॥**

ಜಗತ್ತಿನಲ್ಲಿ ಪ್ರಖ್ಯಾತವಾದ ಕೀರ್ತಿಯುಳ್ಳವರೂ ಶುಚಿಯಾದವರೂ, ಯೋಗನಿರತರೂ, ಪ್ರಕೃತಿ ಪುರುಷರ ಯಥಾವತ್ತಾದ ಸ್ವರೂಪ ತಿಳಿದವರೂ, ಸ್ವಾಭಾವಿಕವಾಗಿ ನಿನ್ನ ಚರಣ ಕಮಲಗಳನ್ನೇ ಮುಖ್ಯ ಗುರಿಯಾಗಿಟ್ಟುಕೊಂಡಿರುವ ಮನಸ್ಸುಳ್ಳವರೂ, ಆದ ಮಹಾತ್ಮರ ಶ್ರೇಷ್ಠವಾದ ವಂಶದಲ್ಲಿ ಜನಿಸಿ ಪಾಪಾತ್ಮನಾದ ನಾನು, ಎಲೈ ಆಶ್ರಯ ನೀಡುವ ಸ್ವಾಮಿಯೇ! ಅಜ್ಞಾನವೆಂಬ ತಮಸ್ಸಿನಲ್ಲಿ ಕೆಳಕ್ಕೆ ಇಳಿದು ಮುಳುಗುತ್ತಿದ್ದೇನೆ.

ವಿವರಣೆ : ಈ ಶ್ಲೋಕದಲ್ಲಿ ಆಚಾರ್ಯರು ತಮ್ಮ ವಂಶದವರನ್ನು ಕುರಿತು ಹೇಳಿದ್ದಾರೆ. ತಮ್ಮ ವಂಶದ ಹಿರಿಯರು ಜಗತ್ತಿನಲ್ಲಿ ಏಕಮುಖವಾಗಿ ಖ್ಯಾತರಾದವರು. ಯಾವಾಗಲೂ ನೋಟ ನಡತೆಗಳಿಗೆ ಹೆಸರಾದವರು. ಆಕರ ಸಂಪರ್ಕದಿಂದ ಕೊಳೆಯಾವುದೂ ಹತ್ತಲಿಲ್ಲ. ಭಗವಂತನ ಜ್ಞಾನವನ್ನು ಯಾವಾಗಲೂ ಹೊಂದಿದವರು. ಇವರು ಹುಟ್ಟಿನಿಂದಲೂ ನಿನ್ನ ವಿಸ್ಮರಣ ವಿಲ್ಲದವರು. ನಿನ್ನ ಪಾದಕಮಲಗಳಲ್ಲಿ ಒಂದೇ ಆದ ಗುರಿಯನ್ನಿಟ್ಟವರು. ಅನ್ಯಥಾಭಾವ ಬೆರಕೆಯಲ್ಲದವರು. ಬರೇ ಒಂದು ಯೋಗ್ಯವಾದ ವಂಶದಲ್ಲಿ ಹುಟ್ಟಿದರೆ ಆಯಿತೇ? ಅದೂ ನಿನ್ನ ಕೃಪೆಯೇ ಅಲ್ಲವೇ.

ವಂಶೇ ಮಹತಿ - ಭಕ್ತರ ಲಕ್ಷಣಗಳು ಏನೇನು ಇರಬೇಕೋ ಅಂತಹ ದಿವ್ಯಗುಣಗಳನ್ನು ಉಳ್ಳ ವಂಶ. ನನ್ನ ಪೂರ್ವಿಕರು ಜ್ಞಾನಕ್ಕೆ ಅನುಗುಣವಾದ ಆಚಾರ, ವೃತ್ತಿಗಳಲ್ಲಿದ್ದವರು. ವಂಶಕ್ಕೆ ಮಹತ್ವ ಬರುವುದು ಕೇವಲ ಅಧಿಕಾರ, ಧನ, ಬಿರುದುಗಳಿಂದಲ್ಲ; ಅವು ಅಶಾಶ್ವತ. ಎಂದೆಂದಿಗೂ ಉಳಿಯತಕ್ಕ ಮಹತಿ ಎಂದರೆ ಆಚಾರ, ನಿಷ್ಠೆ, ಅನುಷ್ಠಾನಗಳಿಂದ ಬರತಕ್ಕದ್ದು. ತಲೆಮಾರುಗಳಿಂದ ಬಂದ ಪರಿಶುದ್ಧ ಪರಂಪರೆಯ ವಂಶ. ಗುಣಪುರುಷ ತತ್ವಸ್ಥಿತಿ ವಿದಾಂ - ಪ್ರಕೃತಿಯು ತ್ರಿವಿಧಾತ್ಮಕವಾದ ಸತ್ವ ರಜಸ್ಸು ತಮಸ್ಸುಗಳಿಂದ ಕೂಡಿದ್ದು. ಪುರುಷ ಎಂದರೆ ಜೀವಾತ್ಮ. ಮೊದಲನೆಯದು ಅಚೇತನ ಮಾರ್ಪಾಡಿಗೆ ಕ್ಲಿಪ್ತವಾಗಿರುತ್ತದೆ. ಚೇತನ ಅದರೊಂದಿಗೆ ಸೇರಿರುತ್ತದೆ. ಇವೆರಡೂ ಮಾಯವಾಗುವುದಿಲ್ಲ. ಇದು ನಿತ್ಯ. ಇದನ್ನು ನಮ್ಮ ಪೂರ್ವಜರು ಚೆನ್ನಾಗಿ ಅರಿತವರು. ಪರಮಾತ್ಮನ ಜ್ಞಾನ ಬಂದಮೇಲೆ ಅವನಿಗೆ ಗುಣವಾದ ಜೀವಾತ್ಮ ಪರಮಾತ್ಮನ ನಿತ್ಯಶರೀರ. ಪ್ರಕೃತಿ ಜೀವಾತ್ಮನಿಗೆ ಅನಿತ್ಯ ಶರೀರ. ಇದು ಲೌಕಿಕಾನುಭವ.

ಆಚಾರ್ಯರು ತಮ್ಮನ್ನು ನಿಂದಿಸಿಕೊಳ್ಳುತ್ತ ಇಂತಹ ಅವರ ವಂಶದಲ್ಲಿ ಹುಟ್ಟಿ ಆವರಣವು ಸಿಕ್ಕದೆ ಇರುವುದರಿಂದ ತಿಳಿಗೇಡಿಯಾಗಿದ್ದೇನೆ. ಪಾಪಾತ್ಮಾ - ಪಾಪವೇ ಸ್ವರೂಪವಾಗಿದೆಯೆಂದು ನಿಂದಿಸಿಕೊಳ್ಳುತ್ತಾರೆ. ಸ್ವದೋಷಕೀರ್ತನೆ ಮಾಡುತ್ತಿದ್ದೇನೆ. ಭಗವತ್ ಜ್ಞಾನವಿಲ್ಲದ್ದರಿಂದ ಇರುಳಿನಲ್ಲಿ ಇನ್ನೂ ಮತ್ತಷ್ಟು ಆಳಕ್ಕೆ ಮುಳುಗುತ್ತಿದ್ದೇನೆ. ಇದು ಸಂಸಾರ. ಇಂತಹವನಾದ ನಾನು ನಿನ್ನ ಮುಂದೆ ಈಗತಿಯಲ್ಲಿದ್ದೇನೆ. ಶರಣದ ರಕ್ಷೆಯ ಭಿಕ್ಷೆಯನ್ನು ನೀಡುವವನು. ಭಕ್ತಿ ಅಥವಾ ಪ್ರಪತ್ತಿಯನ್ನು ಕರುಣಿಸುವವನು ನೀನೇ ಎಂದು ಭಗವಂತನನ್ನು ಸಂಬೋಧಿಸಿ ಪ್ರಾರ್ಥಿಸಿದ್ದಾರೆ. (ಸಶೇಷ.)

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲಮೂಲ : **ಡಾ|| ಎನ್. ರಮೇಶ್,** ಐ.ಎ.ಎಸ್.
ಕನ್ನಡಾನುವಾದ : **ಬಿ. ಎನ್. ಶ್ರೀನಿವಾಸನ್.** ಎಂ.ಎ.

## ಕಂಪನಿಯ ಆಡಳಿತದ ಅಂತ್ಯ - ಮಹಂತರ ಆಳ್ವಿಕೆ.

ಇಂಗ್ಲೆಂಡಿನಲ್ಲಿದ್ದ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕ ಮಂಡಳಿಯು, ಆಡಳಿತ ನಿರ್ವಹಣೆಯ ಹೆಸರಿನಲ್ಲಿ ಹಿಂದೂ ಸಮಾಜದ ವಿಗ್ರಹಾರಾಧನೆಯಲ್ಲಿ ಕಂಪನಿಯ ಅಧಿಕಾರಿಗಳೂ, ಸಿಬ್ಬಂದಿಯೂ ಭಾಗವಹಿಸುವಿಕೆಯನ್ನು ಸಹಿಸಲಿಲ್ಲ. ಸ್ಥಳೀಯ ಧಾರ್ಮಿಕ ಬಾಬತ್ತುಗಳಲ್ಲಿ ಮೂಗು ತೂರಿಸುವುದನ್ನು ತಾವು ಇಷ್ಟಪಡುವುದಿಲ್ಲ ಎಂಬ ಧಾರ್ಮಿಕ ಉದಾರತೆಯ ಸೋಗಿನಿಂದ ಸ್ಥಳೀಯರನ್ನು ಅನುಕೂಲ ಮಾಡಿಕೊಳ್ಳಲು ಆಲಯದ ಆಡಳಿತ ವ್ಯವಹಾರಗಳನ್ನು ಸ್ಥಳೀಯರಿಗೇ ಬಿಟ್ಟುಕೊಡಲು ಆದೇಶ ಹೊರಡಿಸಿತು. ವಿಕ್ಟೋರಿಯ ಮಹಾರಾಣಿಯ ಆಳ್ವಿಕೆಯ ಮೊದಲ ವರ್ಷಗಳಲ್ಲಿ ಎಂದರೆ 1842-43 ರಲ್ಲಿ ಈ ಆಜ್ಞೆಯನ್ನು ಜಾರಿಗೆ ತರಲಾಯಿತು.

ಈ ವೇಳೆಗಾಗಲೇ ಆಡಳಿತದ ವಿವಿಧ ರಂಗಗಳನ್ನು ವ್ಯವಸ್ಥೆಗೊಳಿಸುವಲ್ಲಿ ಬ್ರಿಟಿಷ್ ಕಂಪನಿ ಅಧಿಕಾರಿಗಳು ಸಾಕಷ್ಟು ಘನವಾದ ಕೆಲಸಗಳನ್ನು ಮಾಡಿ ಗಟ್ಟಿಯಾದ ಬುನಾದಿಯನ್ನು ಹಾಕಿದ್ದರು. ಲೆಕ್ಕ ಪತ್ರಗಳನ್ನು ಸಕ್ರಮಗೊಳಿಸಿ, ಜಮಾಖರ್ಚುಗಳನ್ನು ನಿಯಂತ್ರಣಗೊಳಿಸಿ, ಆಲಯದ ಹಲವು ಹನ್ನೊಂದು ಜಮೀನು ಗ್ರಾಮಗಳನ್ನು ಲೆಕ್ಕತೆಗೆದುಕೊಂಡು ಅವುಗಳನ್ನು ನೊಂದಾಯಿಸಿ, ಇನಾಮು ಜಮೀನುಗಳ ಪರಭಾರೆಯಾಗದಂತ ವ್ಯವಸ್ಥೆಯನ್ನುಂಟು ಮಾಡಿ, ಆಲಯದ ವಸ್ತುಗಳು, ಉಪಕರಣಗಳು, ಆಸ್ತಿಪಾಸ್ತಿಗಳ ಬಗ್ಗೆ ತನಿಖೆಗಳನ್ನು ಜರುಗಿಸಿ ಎಲ್ಲವನ್ನು ಲೆಕ್ಕವಾಗಿಸಿ, ಆಭರಣಗಳು ಉಡುಗೊರೆಗಳ ಪಟ್ಟಿಯನ್ನು ತೆಗೆದು, ಎಲ್ಲದರ ಧನಮೌಲ್ಯವನ್ನು ನಿರ್ಧರಿಸಿ, ಸುಸ್ಥಿರವಾಗಿ ಸುಸೂತ್ರವಾಗಿ ಆಲಯದ ಕಾರ್ಯಕಲಾಪಗಳ ನಡೆಯುವಂತೆ ಮಾಡಿದ್ದರು. ಕ್ರಿ.ಶ. 1818 ರಲ್ಲಿ ಆಲಯದ ಹಣಸಂಗ್ರಹವನ್ನು ಎತ್ತಿಹಾಕಿದ ಒಂದು ಪ್ರಸಂಗ ವುಂಟಾಯಿತು. ನಂತರ ಅಂತಹ ಭ್ರಷ್ಟತೆಗಳನ್ನು ತಡೆಗಟ್ಟಲು ತಕ್ಕ ಕ್ರಮಗಳನ್ನು ಕೈಗೊಳ್ಳಲಾಯಿತು. ಈ ಪ್ರಸಂಗವನ್ನು ಕೈಗೆತ್ತಿಕೊಂಡು ತನಿಖೆ ನಡೆಸಿದ ಕಮೀಷನರ್ ಬ್ರೂಸ್ ಮಹಾಶಯನು ಬ್ರೂಸ್ ಕೋಡ್ ಎಂದು ಕರೆಯಲಾದ ಒಂದು ಆಚಾರ ಸಂಹಿತೆಯನ್ನು ಸಿದ್ಧಪಡಿಸಿ ಆಡಳಿತವು ಅಲ್ಲಿನ



ನಿಯಮಗಳಂತೆ ನಡೆಯಬೇಕೆಂದು ಕಟ್ಟಳೆ ಮಾಡಿದನು. ''ತಿರುಮಲೆಯ ಆಲಯದ ಕಾರ್ಯಗಳ ನಿರ್ವಹಣೆಯ ನಿಯಮಗಳು ಹಾಗೂ ಈ ದೇವಾಲಯಕ್ಕೆ ಹೊಂದಿಕೊಂಡ ಸಿಬ್ಬಂದಿಯ ನಡವಳಿಕೆಯ ನಿಯಮಗಳು'' ಎಂದು ಕರೆಯಲಾದ ಈ ನೀತಿ ಸಂಹಿತೆಯಲ್ಲಿನ ಅನುಬಂಧದಂತೆ ತಹಸೀಲ್ದಾರನ ಜೊತೆಗೆ ಆಲಯದ ಪಾರುಪತ್ಯಗಾರನು ಸಂಯುಕ್ತ ಖಜಾನಾಧಿಕಾರಿ ಯಾಗುತ್ತಾನೆ. ಇದುವರೆಗೆ ಆಲಯದ ಅರ್ಚಕನಿಗೆ ದೇವರ ಪೂಜೆಯಲ್ಲಿ ಹಿರಿಯರಾಗಿ ನೆರವು ನೀಡುತ್ತಿದ್ದ ಜಿಯಂಗಾರರು ಈಗ ಆಲಯದ ಧರ್ಮಾತೀತ ನಿಯಂತ್ರಣದಲ್ಲಿ ಸಾಮಾನ್ಯ ಆಡಳಿತದಲ್ಲಿ - ಪಾಲು ಪಡೆಯುವಂತಾಗುತ್ತದೆ. ನೀತಿ ಸಂಹಿತೆಯ ಮೂಲ ಉದ್ದೇಶವಾದ ಭ್ರಷ್ಟತೆಯ ನಿವಾರಣೆಯ ಮಾತು ಹೇಗೇ ಇದ್ದರೂ, ನಂತರದ ಕಾಲದ ಆಲಯದ ವ್ಯವಹಾರಗಳಲ್ಲಿನ ಗೋಜಲಿಗೆ ಇದು ಬುನಾದಿ ಯಾಯಿತು.

### ಆಲಯಾಡಳಿತವನ್ನು ಆಕ್‌ಲೆಂಡ್ ಬಿಟ್ಟುಕೊಟ್ಟದ್ದು :

ಲಾರ್ಡ್ ಆಕ್‌ಲೆಂಡರ ಕಂಪನಿ ಸರ್ಕಾರವು 'ಸರ್ಕಾರಿ ಅಧಿಕಾರಿಗಳು ಎಲ್ಲ ರೀತಿಯ ಧಾರ್ಮಿಕ ದತ್ತಿಗಳ ಭೂಮಿಗಳ ಆಡಳಿತದಲ್ಲಿ ಕೈಹಾಕುವುದನ್ನು ಬಿಡಬೇಕು' ಎಂಬ ನಿರ್ಧಾರ ಮಾಡಿತು. ಅದರಂತೆ ಜಿಲ್ಲಾಧಿಕಾರಿಗಳಿಗೆ ಸ್ಥಳೀಯ ಜನರಿಗೆ ಆಲಯಗಳ ಅಧಿಕಾರಗಳನ್ನು ನೀಡುವ ಬಗ್ಗೆ ತಕ್ಕ ಸಲಹೆಗಳನ್ನು ನೀಡಬೇಕೆಂದು 1841 ರಲ್ಲಿ ಕರೆ ನೀಡಲಾಯಿತು. ಆಡಳಿತಗಾರರ ಆಂತರ್ಯದಲ್ಲಿನ ಈ ಅನಿರೀಕ್ಷಿತ ಪರಿವರ್ತನೆಗೆ ಕ್ರೈಸ್ತ ಮಿಷನರಿಗಳ ಒತ್ತಾಯವೇ ಕಾರಣವಾಗಿದ್ದಿರಬಹುದು. ಅವರಲ್ಲಿನ ಕಟುತ್ವ ಭಾವವು ಮಾರ್ಷ್‌ಮನ್ ಬರೆದ ಇಂಡಿಯಾದ ಚರಿತ್ರೆ ಭಾಗ - 3 ರಲ್ಲಿನ ಈ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ. (ಮಾರ್ಷ್‌ಮನ್ ಸ್ವತಃ ಒಬ್ಬ ಕ್ರೈಸ್ತ ಪಾದ್ರಿಯಾಗಿದ್ದನು)

ಧಾರ್ಮಿಕನಾದ ಹಿಂದೂವಿನ ಭಾವನೆಗಳಿಗೆ ಪೆಟ್ಟುಕೊಡುವ, ಧರ್ಮಭೀರು ಕ್ರೈಸ್ತರ ಭಾವನೆಗಳನ್ನು ಹೀಗೆಳೆಯುವಂತಹ 'ಆಲಯಗಳ ಆಡಳಿತದಲ್ಲಿನ ಆಂಗ್ಲ ಸಂಬಂಧ'ವನ್ನು ಕಡಿದುಕೊಳ್ಳುವುದರ ಮೂಲಕ - ಆಕ್ಲೆಂಡರ ಸರ್ಕಾರ ಇಂಡಿಯಾದೇಶದ

ಚರಿತ್ರೆಯಲ್ಲಿ ಉಲ್ಲೇಖನೀಯ ಕಾರ್ಯವನ್ನೆಸಗಿದೆ. ಕಂಪನಿಯ ನಿರ್ದೇಶಕರ ಮಂಡಳಿಯ ಅಧ್ಯಕ್ಷ ಚಾರ್ಲಸ್ ಗ್ರಾಂಟ್ ತಮ್ಮ 1833 ರ ಪತ್ರದಲ್ಲಿ ಕುಂಪನಿ ಸರ್ಕಾರವು ಭಾರತವನ್ನು ಆಳುವಲ್ಲಿ ಅಲ್ಲಿನ ಧರ್ಮದ ವಿಚಾರದಲ್ಲಿ ತಲೆಹಾಕುವುದರ ಬಗ್ಗೆ ನಿರ್ದೇಶಕರಿಗಿದ್ದ ದೃಷ್ಟಿಕೋನದ ಬಗ್ಗೆ ಸ್ಥಳೀಯ ಅಧಿಕಾರಿಗಳಿಗೆ ಬರೆದು ತಿಳಿಸಿದ್ದರು. ಇಂಡಿಯಾ ದೇಶದ ಸಾಮಾನ್ಯ ಜನಕ್ಕೆ ಅವರ ಧರ್ಮವು ಸಾಮಾನ್ಯ ಮಾನವ ಧರ್ಮಕ್ಕೆ ನೇರ ವಿರುದ್ಧವಾಗದ ಹೊರತು ಕುಂಪನಿ ಸರ್ಕಾರವು ಜನರ ಧರ್ಮದ ವಿಷಯದಲ್ಲಿ ತಲೆ ಹಾಕುವುದಿಲ್ಲವೆಂಬ ಭರವಸೆ ನೀಡಲಾಗಿದ್ದಿತು. ಹೀಗಾಗಿ ಭಾರತೀಯರ ಆಲಯ ವ್ಯವಹಾರಗಳಲ್ಲಿ ಅವುಗಳ ಪರಂಪರಾಗತ ಧಾರ್ಮಿಕ ಕಾರ್ಯಕ್ರಮಗಳ ನಿರ್ವಹಣೆಯಲ್ಲಿ ಆಂಗ್ಲ ಅಧಿಕಾರಿಗಳ ಹಸ್ತಕ್ಷೇಪ ನಿಲ್ಲಬೇಕಾಯಿತು. ಎಲ್ಲ ಕಡೆಯಲ್ಲಿಯೂ ಯಾತ್ರಿಕ ತೆರಿಗೆಯನ್ನು ನಿಷೇಧಿಸಬೇಕಾಯಿತು. ಆಲಯದಲ್ಲಿ ನೀಡಲಾಗುವ ತಪ್ಪು ಗಾಣಿಕೆ ಹರಕೆಗಳು ಸರ್ಕಾರದ ಆಸ್ತಿಯಲ್ಲವೆಂದು ಪರಿಗಣಿಸಬೇಕಾಯಿತು. ಜೊತೆಗೇ ಇಂತಹ ಧನದ ವಸೂಲಾತಿಯಲ್ಲಿ ಸಂಗ್ರಹದಲ್ಲಿ, ರಕ್ಷಣೆಯಲ್ಲಿ, ಯಾವೊಬ್ಬ ಆಂಗ್ಲ ಅಧಿಕಾರಿಯೂ ಭಾಗವಹಿಸಬಾರದು ಎಂದಾಯಿತು. ಸ್ಥಳೀಯರನ್ನು ತಮ್ಮ ಎಲ್ಲ ಧಾರ್ಮಿಕ ಆಚರಣೆಗಳಲ್ಲಿ, ಆಲಯ ಕಾರ್ಯಗಳಲ್ಲಿ, ಧರ್ಮ ಕಾರ್ಯದಲ್ಲಿ ಅವರ ಪಾಡಿಗೆ ಅವರನ್ನು ಬಿಡಬೇಕು ಎಂದಾಯಿತು. ಈ ನಿರೂಪವನ್ನು ಬಂಗಾಳದಲ್ಲಿ ಅಲಕ್ಷ್ಯದಿಂದ ಅನುಸರಿಸಲಾಯಿತು.

ಮದರಾಸು ಸರ್ಕಾರವು ತನ್ನ ಬಹುಕಾಲದ ಆಡಳಿತದಿಂದಲೂ, ಇಲ್ಲಿನ ಅಧಿಕಾರಿಗಳ ನಿರಂತರತೆ ಹಾಗೂ ಸಾರ್ವಜನಿಕ ಪರ ಧೋರಣೆಗಳಿಂದಾಗಿ ಮಾನನೀಯ ಪ್ರಾಂತ್ಯವಾಗಿದ್ದಿತು. ಇಲ್ಲಿ ಒಂದು ಅರ್ಧ ಶತಮಾನದವರೆಗೆ ಸ್ಥಳೀಯ ಮೂಢನಂಬಿಕೆಗಳಿಗೆ ಮರ್ಯಾದೆಯ ಸ್ಥಾನವನ್ನು ಕಲ್ಪಿಸಲಾಗಿದ್ದಿತು. ಇಂತಹ ಒಂದು ಮೌಢ್ಯದ ಭಾಗವಾಗಿರದಂತೆ ಮಾಡಲು - ಈಸ್ ಇಂಡಿಯಾ ಕಂಪನಿಯ ಪರವಾಗಿ ವಿಗ್ರಹಕ್ಕೆ ಸಮರ್ಪಣೆಗಳನ್ನು ನೀಡುವುದು, ವಿಗ್ರಹಕ್ಕೆ ಅಲಂಕರಿಸುವುದು, ವಿಗ್ರಹದ ಹುಟ್ಟಿದ ಹಬ್ಬದ ಮೆರವಣಿಗೆಯಲ್ಲಿ ಕುಶಾಲುತೋಪು ಹಾರಿಸುವುದು, ಮೆರವಣಿಗೆಯಲ್ಲಿ ಸೈನಿಕ ಮುಜುರೆ ಮಾಡುವುದು - ಮೊದಲಾದವುಗಳನ್ನು ನಿಲ್ಲಿಸಲು - ಕಂಪನಿಯ ನಿರ್ದೇಶಕ ಮಂಡಳಿಯ ಅಧ್ಯಕ್ಷರಾದ ಬಟರ್‌ವರ್ತ್ ಅವರು ಶಪಥ ಪೂರ್ವಕ ಪತ್ರವನ್ನೇ ಬರೆಯಬೇಕಾಯಿತು.

ಕುಂಪನಿ ಸರ್ಕಾರವು ತಿರುಪತಿಯ ಆಲಯವನ್ನೇ ಅಲ್ಲದೆ ಪ್ರಸಿಡೆನ್ಸಿಯ ಎಲ್ಲ ಆಲಯಗಳನ್ನು ನಿರ್ವಹಿಸುತ್ತಿದ್ದಿತು. ತಿರುಪತಿ ಬೆಟ್ಟದ ಆಲಯವನ್ನೂ ಸೇರಿಸಿಕೊಂಡಂತೆ ಉತ್ತರ ಆರ್ಕಾಟು ರಾಜ್ಯದ ಕುಂಪನಿಯ ಆಡಳಿತ ನಡೆದಿದ್ದ ಆಲಯಗಳ ಸಂಖ್ಯೆ 188. ಕ್ರಿ.ಶ. 1841 ರ ಹಿಂದಿನ ಹತ್ತು ವರ್ಷದಲ್ಲಿ ಎಲ್ಲ ಆಲಯಗಳಿಂದುಂಟಾದ ಆದಾಯದ ಸರಾಸರಿ (ತಿರುಪತಿಯ ಆಲಯದ ಹೊರತು) 32647 ರೂಪಾಯಿಗಳಾಗಿದ್ದು ಈ ಆಲಯಗಳಿಗೆ ನೀಡಿದ ಸರಾಸರಿ ತಸದೀಕು ಮೊತ್ತ 27277 ರೂಪಾಯಿಗಳಾಗಿದ್ದವು. ಇದೇ ಸಮಯದಲ್ಲಿ ತಿರುಪತಿಯ ಆಲಯದ ಸರಾಸರಿ ಆದಾಯವು 109873 ರೂಪಾಯಿಗಳಾಗಿದ್ದು ವೆಚ್ಚದ ವಿತರಣೆಯ ಸರಾಸರಿ 32528. ಕ್ರಿ.ಶ. 1842 ರ ಮಧ್ಯಭಾಗದ ಹೊತ್ತಿಗೆ ತಿರುಪತಿಯ ಆಲಯದ ಹೊರತು ಮಿಕ್ಕ ಎಲ್ಲ ಆಲಯಗಳ ಅಧಿಕಾರ ವಿಸರ್ಜನೆಗೆ ಸಲಹೆಗಳನ್ನು ಕಳುಹಿಸಲಾಗಿದ್ದಿತು. ಇಲ್ಲೆಲ್ಲ ಸದರಿ ಗ್ರಾಮಗಳ ಮಾಮಲೇದಾರರು, ಕರಣಿಕರು, ಮಿರಾಸಿದಾರರು, ವಂಶ ಪಾರಂಪರ್ಯದ ಸೇವಕರಗಳನ್ನೇ ಧರ್ಮಕರ್ತರ ಸ್ಥಳಗಳಿಗೆ ಸೂಚಿಸಲಾಗಿದ್ದಿತು. ಈ ವರ್ಷದ ಕೊನೆಯ ಹೊತ್ತಿಗೇ ಇಲ್ಲೆಲ್ಲ ಸ್ಥಳೀಯರ ಆಡಳಿತ ಜಾರಿಗೆ ಬರುವಂತೆ ಆಯಿತು. ತಿರುಪತಿಯ ಆಡಳಿತದ ಅಧಿಕಾರ ವರ್ಗಾವಣೆಯು ಅನೇಕ ಸಮಸ್ಯೆಗಳನ್ನು ಗಂಟು ಹಾಕಿಕೊಂಡಿದ್ದಿತಾದ್ದರಿಂದ ಇದರ ತೀರ್ಮಾನ ನಿಧಾನವಾಯಿತು. ''ಈ ಅಧಿಕಾರ ಪರಿವರ್ತನೆಯನ್ನು ಇಲ್ಲಿನ ಪ್ರತಿಯೊಬ್ಬರೂ ವಿರೋಧಿಸಿದರು. ಈ ಬಗೆಗಿನ ತೀರ್ಮಾನವನ್ನು ಅನ್ಯಾಯವೆಂದು ಕರೆದು ಕಡೆಯವರೆಗೆ ಇದನ್ನು ಪ್ರತಿಭಟಿಸುವುದಾಗಿ ಹೇಳಿದರು.''

**ಆಲಯಾಡಳಿತಕ್ಕಾಗಿ ಜಿಲ್ಲಾಧಿಕಾರಿ ಯೋಜನೆ :**

ಜಿಲ್ಲಾಧಿಕಾರಿ (ಜಿ.ಎಂ., ಓಗಿಲ್ವೀ) ಬರೆಯುವಂತೆ ''ಅವರು ತೆಗೆದುಕೊಂಡಿದ್ದ ನಿರ್ಧಾರವನ್ನು ಯಾವುದೇ ರೀತಿಯ ಸಮಜಾಯಿಷಿ, ಸಂಧಾನ, ಸಮಾಧಾನ, ತರ್ಕ, ವಾದಗಳಿಂದಲೂ ಬದಲಾಯಿಸಲಾಗುವುದಿಲ್ಲವೆಂಬುದನ್ನು ಕಂಡುಕೊಂಡೆ. ಅವರು ಹೇಳುವಂತೆ ಆಲಯದ ಆಡಳಿತ ನಿರ್ವಹಣೆ ಪ್ರಾಚೀನ ಕಾಲದಿಂದಲೂ ಸ್ಥಳದ ಸರ್ಕಾರದ ಕೈಗಳಲ್ಲಿದ್ದಿತು - ಈಗ ಪ್ರವೇಶಗೊಳಿಸಲು ಯೋಜಿಸಲಾಗಿರುವ ಹೊಸ ಪದ್ಧತಿ ನ್ಯಾಯ ಬಾಹಿರವಾದದ್ದು. ಪರಂಪರೆಯ ವಿರುದ್ಧವಾದದ್ದೂ ಆಗಿದ್ದು ಇದನ್ನು ಜಾರಿಗೆ ತಂದದ್ದೇ ಆದರೆ ಆಲಯದ ಪೂಜಾ ಪದ್ಧತಿಯೇ ನಿಂತು ಹೋಗಬಹುದು.'' ಸರ್ಕಾರದ ಬದಲಾಯಿಸಿದ ನೀತಿಯ ಅಂತರ್ಯವನ್ನು ತಿಳಿಯಲಾರದೆ ಹೋದ, ಅವರಿಗೇ ಆಲಯ ವ್ಯವಹಾರಗಳನ್ನು ಒಪ್ಪಿಸುವುದನ್ನು ತಿಳಿಯಲಾರದ ಹೋದ, ಆಲಯದ ಆಡಳಿತಕ್ಕೆ ಸೂಕ್ತವಾದ ವ್ಯವಸ್ಥಿತವಾದ ಪದ್ಧತಿಯನ್ನು ಏರ್ಪಡಿಸುವ ತನ್ನ ಪ್ರಯತ್ನದಲ್ಲಿ ನೆರವು ನೀಡಲು ಮುಂದೆ ಬರದಂತಹ ಜನರ ಬಗ್ಗೆ ಆತನಿಗೆ ಬೇಸರವುಂಟಾಗಿ, ಹೀಗೆ ಬರೆಯುತ್ತಾನೆ - ''ಈ ಮಾತನ್ನು ನಾನು ಹೇಳುವ ಹೊತ್ತಿನಲ್ಲಿ ತಿರುಪತಿಯಲ್ಲಿನ ರಾಜಕಾರಣ ಯಾವ ಕಡೆ ಬೀಸುತ್ತಿದೆ ಎಂಬುದನ್ನು ಗುರುತಿಸಿ ಇಲ್ಲಿನ ಜನರಿಂದ ಯಾವುದೇ ರೀತಿಯ ಸಹಕಾರವನ್ನೂ ಪಡೆಯಲಾಗುವುದಿಲ್ಲವೆಂಬ ಬಗ್ಗೆ ಒತ್ತು ಹಾಕುತ್ತ, ಹೊಸ ಪದ್ಧತಿಯೊಂದನ್ನು ನಾನು ಸೂಚಿಸುತ್ತೇನೆ. ಅನಿವಾರ್ಯವಾದ ಪಕ್ಷದಲ್ಲಿ ಈ ಹೊಸ ಪದ್ಧತಿಯನ್ನು ಅನುಸರಿಸಿದರೂ ಸಹ ಆಲಯದ ಆಡಳಿತ ವ್ಯವಹಾರಗಳನ್ನು ಸುಸೂತ್ರವಾಗಿರುವಂತೆ ಇರುತ್ತದೆ.'' ''ಈ ಕ್ರಮವನ್ನು ಕೈಗೆತ್ತಿಕೊಂಡದ್ದೇ ಆದರೆ - ಆಲಯ ನಿರ್ವಹಣೆಯಲ್ಲಿ ಸರ್ಕಾರದ ಪಾಲುದಾರಿಯನ್ನು ಒಮ್ಮಿಂದೊಮ್ಮೆಲೇ ವಾಪಸ್

ಪಡೆಯುವುದರ ಹೊರತು - ಮಿಕ್ಕ ಯಾವುದೇ ಕ್ರಮದಿಂದಲೂ, ಇಲ್ಲಿನ ಆಲಸಿಗಳೂ, ಧರ್ಮಾಂಧರೂ ಆದ ಪೂಜಾರಿಗಳಲ್ಲಿನ ಚಿಂತನ ಶಕ್ತಿಯನ್ನು ಎಚ್ಚರಗೊಳಿಸಿದಂತಾಗಿ ಅವರೆಲ್ಲ ಆಲಯದ ಸುತ್ತಲೂ ಸೇರಿ ಅದೃಶ್ಯರಾಗಿಬಿಡುವರು. ಹುಡುಕಿದರೂ ಸಿಗುವುದಿಲ್ಲ. ಹೀಗಾದಲ್ಲಿ ಅವರೆಲ್ಲ ತಮ್ಮ ಸೋಮಾರಿತನದ ನಿರ್ಲಕ್ಷದ ನಿಷ್ಕ್ರಿಯತೆಯಲ್ಲಿ ಜೀವನ ಸಾಗಿಸುತ್ತ, ತಮ್ಮ ಒಡೆತನದ ಗ್ರಾಮ ಭೂಮಿಗಳ ಆದಾಯವನ್ನು ಹಾಯಾಗಿ ಅನುಭವಿಸುತ್ತ ಕಂಪನಿ ಸರ್ಕಾರ ಅತ್ಯಂತ ಎಚ್ಚರಿಕೆಯಿಂದ ರಕ್ಷಿಸಿದ ಅವರ ಧಾರ್ಮಿಕ ಹಕ್ಕುಗಳಿಂದುಂಟಾದ ತಮ್ಮ ಕುರುಡು ನಂಬಿಕೆ, ಪೂರ್ವಗ್ರಹಿಕೆಗಳೊಂದಿಗೆ ತಮ್ಮ ಪೂಜಾದಿಗಳನ್ನು ನಡೆಸಿಕೊಳ್ಳುತ್ತ ಹೋಗುವರು. ಇಂತಹವರಿಗೆ ತಮ್ಮ ಅನುಕೂಲಗಳ, ರಕ್ಷಣೆಯ ಸಹಜ ಪರಿಕಲ್ಪನೆಗಳಿಗೆ ತಕ್ಕದಾದ ಪರಿವರ್ತನೆ ಸಂತಸವನ್ನೇ ತಂದೀತು.''

ಈತನ ಸಲಹೆಯ ಕ್ರಮವೆಂದರೆ ''ಒಂದು ಆಡಳಿತ ನಿರ್ವಾಹಕ ಮಂಡಳಿಯಿರಬೇಕು. ಅದರಲ್ಲಿ ಜಿಯಂಗಾರರು, ಪೂಜಾರಿಗಳು, (ಇವರು 7 ಮಂದಿಯಿದ್ದರು) ಜೊತೆಗೆ ಊರಿನ ಪ್ರಶ್ನಾತೀತ ನಡವಳಿಕೆಯ ತಕ್ಕಷ್ಟು ಸದಸ್ಯರ ಸಾಮಾನ್ಯ ಸಮಿತಿಯಿರಬೇಕು. ಕಾಳಹಸ್ತಿ ಕಾರ್ವೇಟಿನಗರಗಳ ಜಮೀಂದಾರರನ್ನು ಮಂಡಳಿಯ ಆಶ್ರಯದಾತರೆಂದು ಅಥವಾ ಗೌರವ ಸದಸ್ಯರೆಂದು ಆಯ್ಕೆ ಮಾಡಬೇಕು.''

ಕಂದಾಯ ವಿಭಾಗವು ಈ ವ್ಯವಸ್ಥೆಯನ್ನು ಒಪ್ಪಲಿಲ್ಲ. ಕಾರಣ - ''ಇಲ್ಲಿನ ಆಲಯದಲ್ಲಿ ವಂಶ ಪರಂಪರೆಯಿಂದ ಬಂದಿರುವ ಸಿಬ್ಬಂದಿಯು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ತೊಡಗಿರುವ ಕೆಳ ಸ್ತರದಿಂದ ಮೇಲೆತ್ತಿ ಆಲಯದ ನಿರಂಕುಶ ಒಡೆಯರ ಹಂತಕ್ಕೆ ಏರಿಸುವ ಮಟ್ಟದವರಲ್ಲ.''

ಇದರಿಂದಾಗಿ ಹೊಸ ವ್ಯವಸ್ಥೆಯಬಗ್ಗೆ ನೂತನವಾದ ಸಲಹೆಗಳನ್ನು ನೀಡಬೇಕೆಂದು ಈ ಮಧ್ಯದಲ್ಲಿ ವರ್ಗವಾಗಿ ಬಂದಂತಹ ಹೊಸ ಜಿಲ್ಲಾಧಿಕಾರಿಯನ್ನು ಕೇಳಲಾಯಿತು. ಈತನು 1842 ರ ಡಿಸೆಂಬರ್ 17 ರಂದು ನೀಡಿದ ವರದಿಯ ಪ್ರಕಾರ ''ಸರ್ಕಾರದ ಅಧಿಕಾರ ತ್ಯಾಗದ ಬಗೆಗಿನ ಮೊದಲಿನ ಅಭ್ಯಂತರಗಳೆಲ್ಲ ನಿವಾರಣೆಯಾಗಿದ್ದು, ಇಲ್ಲಿನ ಮಹಂತರೂ, ದೊಡ್ಡ ಜಿಯಂಗಾರರೂ ಆಲಯದ ಧರ್ಮಕರ್ತರಾಗಲು ಅಭ್ಯರ್ಥನೆಗಳನ್ನು ಸಲ್ಲಿಸಿದ್ದರು'' ಎಂದೂ ತಿಳಿದು ಬರುವುದು. ಜಿಯಂಗಾರರಾದರೋ ತಾವೊಬ್ಬರೇ ಅಥವಾ ಮಹಂತಹೊಡನೆ ಸೇರಿ ಈ ಜವಾಬ್ದಾರಿಯನ್ನು ಹೊರಲು ಸಿದ್ಧರಾಗಿದ್ದರು. ಮಹಂತರು ಮಾತ್ರ ತಾವೊಬ್ಬರೇ ಧರ್ಮಕರ್ತರಾಗಿರಬೇಕೆಂದು ಬಯಸಿದ್ದರು. ಅವರಿಗೆ ಜಿಯಂಗಾರರ ಸಹಜೀವನ ಅಪೇಕ್ಷಿತವಾಗಿರಲಿಲ್ಲ.

ಕಾರ್ವೇಟಿನಗರದ ರಾಜನು ಮೇಲುಸ್ತುವಾರಿಯನ್ನು ವಹಿಸಲು ಸಿದ್ಧನಿದ್ದನು. ಜಿಲ್ಲಾಧಿಕಾರಿ - ಮೈಸೂರು ಹಾಗೂ ವೆಂಕಟಗಿರಿಯ ರಾಜರನ್ನು ಆಡಳಿತವನ್ನು ವಹಿಸಿಕೊಳ್ಳಲು ಕೇಳಿಕೊಂಡರು. ಅವರಿಬ್ಬರೂ ಅದಕ್ಕೆ ಸಿದ್ಧರಾಗಿರಲಿಲ್ಲ. ಆಲಯದಲ್ಲಿ ಹಲವಾರು ಪರಿವರ್ತನೆಗಳನ್ನು ತಂದು ಪೂಜೆಯ ವ್ಯವಸ್ಥೆಯನ್ನು ಸುಸ್ಥಿರಗೊಳಿಸಿದ ರಾಮಾನುಜರ ಪರಂಪರೆಯ ಶಿಷ್ಯ ತಾವು ಆಗಿರುವುದರಿಂದಲೂ 1818 ರಲ್ಲಿ ಆಲಯದ ನಿಧಿಯ ಅಪರಾತಪರಾ ನಡೆದಾಗ ಅದನ್ನು ವಿಚಾರಿಸಿ, ನಂತರ ಅಂತಹ ಭ್ರಷ್ಟತೆಗಳಿಗೆ ವಿರಾಮ ಹಾಡುವ ಆಲಯದ ಆಡಳಿತದ ನಿಯಮ ನಡಾವಳಿಗಳನ್ನು ತಯಾರಿಸುವಾಗ ಕುಂಪನಿ ಸರ್ಕಾರದ ಜಿಲ್ಲಾಧಿಕಾರಿ ಬ್ರೂಸ್ ತಮ್ಮನ್ನು ಆಲಯದ ಆಡಳಿತದಲ್ಲಿ ಅತಿ ಎತ್ತರದ ಪಾತ್ರ ನಿರ್ವಹಣೆಗೆಂದು ಗುರುತಿಸಿದ್ದರಿಂದಲೂ, ತಾವೇ ಆಲಯದ ಧರ್ಮಕರ್ತವಾಗುವುದು ನ್ಯಾಯವೆಂದು ಜಿಯಂಗಾರರು ವಾದ ಮಂಡಿಸಿದ್ದರು. ಜಿಲ್ಲಾಧಿಕಾರಿಯು ಈ ವಾದವನ್ನು ಜಾಗರೂಕತೆಯಿಂದ ಪರಿಶೀಲಿಸಿ ಇದರಲ್ಲಿ ಹುರುಳಿಲ್ಲವೆಂದು ತೀರ್ಮಾನಿಸಿದ. ಆತ ನೀಡಿದ ವಿವರ ಹೀಗಿದೆ-

ಜಿಯಂಗಾರರು ತಮ್ಮ ಗುಮಾಸ್ತನನ್ನು ಬರಖಾಸ್ತು ಮಾಡುವುದಕ್ಕಿಂತ ಹೆಚ್ಚಾದ ಯಾವುದೇ ಅಧಿಕಾರವನ್ನಾದರೂ ಹೊಂದಿದ್ದಾರೆ ಎಂಬುದು ಎಲ್ಲಿಯೂ ದಾಖಲೆಯಾಗಿಲ್ಲ. ಆತನ ಉಪಸ್ಥಿತಿಯು ಹಲವಾರು ಸಂದರ್ಭಗಳಲ್ಲಿ ಇತರರೊಡನೆ ಇವರೂ ಇರಬೇಕಾಗಿತ್ತು. ಇದಕ್ಕೂ ಕಾರ್ಯಕಲಾಪಗಳ ಸಕ್ರಮ ನಿರ್ವಹಣೆಯೇ ಆಧಾರ ಸೂತ್ರವಾಗಿದ್ದಿತು. ಹೀಗಾಗಿ ಅವರು ಸಲ್ಲಿಸಿರುವ, ಮುಂದುಮಾಡಿರುವ ವಾದಕ್ಕೆ ಯಾವುದೇ ತಳಹದಿಯೇ ಇಲ್ಲವಾಗಿದೆ.

ಪ್ರಶ್ನೆಯ ವಸ್ತುಸ್ಥಿತಿಯೇ ಈ ನೆಲೆಯಲ್ಲಿ ನಿಂತಿರುವಾಗ ಪರಿಶೀಲನೆಗೆಂದು ಅವರು ಮುಂದು ಮಾಡಿರುವ ಪ್ರಥಮ ಪರಿಚಯಾಂಶಕ್ಕೆ ಎಡೆಯೇ ಇಲ್ಲವಾಗುತ್ತದೆ. ದೊಡ್ಡ ಜಿಯಂಗಾರರು ತಾವು ಧರ್ಮಕರ್ತರಾಗಲು ತಕ್ಕವರೆಂದು ನೀಡಿರುವ ಕಾರಣಗಳನ್ನು ನಿರಾಕರಿಸಬಹುದಾದರೂ - ಮಿಕ್ಕೆಲ್ಲ ರೀತಿಯ ಅರ್ಹತೆಗಳಿರುವಲ್ಲಿ - ಅವರು ಅಪೇಕ್ಷೆ ಪಟ್ಟು ಮುಂದೆ ಬಂದಿರುವಿಕೆಯನ್ನು ತಿರಸ್ಕರಿಸುವಂತಿಲ್ಲ. ಆದರೂ ಪ್ರಸ್ತುತ ಸಂದರ್ಭದಲ್ಲಿ ಅವರು ಧರ್ಮಕರ್ತರಾಗುವ ಅವಕಾಶವನ್ನು ನಿರಾಕರಿಸಲಾಗಿದೆ; ಕಾರಣ ಮಂಡಳಿಯು ಎಲ್ಲ ಪ್ರಾಥಮಿಕಾಂಶಗಳನ್ನೂ ಪರಿಶೀಲಿಸಿ, ಸಧ್ಯಕ್ಕೆ ಕಾರ್ಯಕರ್ತರಲ್ಲಿ ಒಬ್ಬರಾಗಿರುವ ಅವರಿಗೆ ಅಷ್ಟು ಹಿರಿಯ ಮಟ್ಟದ ಅಧಿಕಾರದ ಸ್ಥಾನ ನೀಡುವುದನ್ನು ಮಾನ್ಯ ಮಾಡದಾಗಿದೆ. ಜೊತೆಗೇ ವೇದ ಪಠಣ ಮಾಡುವ ಆಚಾರ್ಯ ಪುರುಷರೂ ಜಿಯಂಗಾರರು ಧರ್ಮಕರ್ತರಾಗುವುದನ್ನು ವಿರೋಧಿಸಿರುವರು. ತಾವು ಮಹಂತರ ಜೊತೆಗೂಡಿ ಕೆಲಸ ಮಾಡಲು ಸಿದ್ಧ ಎಂದು ಹೇಳಿರುವ ಜಿಯಂಗಾರರ ಮಾತು ಮಹಂತರ ವಿರೋಧಕ್ಕೆ ಪಕ್ಕಾಗಿದೆ.''

ಈ ಕಾರಣಗಳಿಂದ ಮಹಂತನನ್ನೇ ಧರ್ಮಕರ್ತನನ್ನಾಗಿ ಮಾಡಲಾಯಿತು. ಆದರೆ ಮಂಡಳಿಯ ಮುಂದೆ ಈ ಮಹಂತರ ಅಧಿಕಾರವನ್ನು ವಿರೋಧಿಸಿ ಜಿಯಂಗಾರರು ಪ್ರಬಲವಾಗಿ ವಾದ ಮಾಡಿದರು. ನಂತರದ ಜಿಲ್ಲಾಧಿಕಾರಿಯು 1843 ರ ಫೆಬ್ರವರಿ 13 ರಂದು ಬರೆದಿರುವ ಪತ್ರದಲ್ಲಿ ಮಹಂತರನ್ನು ಧರ್ಮಾಧಿಕಾರಿಯಾಗಿ ಆಯ್ಕೆ ಮಾಡಿದ್ದನ್ನು ಸಮರ್ಥಿಸುವುದನ್ನು ಕೆಳಗಣ ಉಲ್ಲೇಖದಲ್ಲಿ ಕಾಣಬಹುದು.

ಮಹಂತರ ಧರ್ಮಕರ್ತರ ಅಧಿಕಾರವನ್ನು ದೊಡ್ಡಜಿಯಂಗಾರರು ಹಲವು ಕಾರಣಗಳಿಂದ ವಿರೋಧಿಸಿದ್ದಾರೆ. ಅವರ ವಾದದಂತೆ - ಮಹಂತರು ಆಲಯದೊಡನೆ ಸಂಬಂಧ ಹೊಂದಿದವರಲ್ಲ. ಮಹಂತರ ಪರಂಪರೆಗೆ ತಕ್ಕಂತೆ ವಿರಕ್ತರು ಆಗಿರಬೇಕಾದವರು, ಸ್ಥಳಕ್ಕೆ ಆಗಂತುಕರು ಹಾಗೂ ಪೂಜೆ ಮಾಡುವುದಕ್ಕೆ ವಿರೋಧಿಗಳು ಆಗಿರುವವರು. ಮಹಂತರ ಹಿರಿಮೆಯ ವಿರುದ್ಧ ಯಾವ ಮಾತೂ ಅವರಲ್ಲಿ ಇಲ್ಲ. ಕಾರ್ವೇಟಿ ನಗರದ ರಾಜರಾದರೊ - ಜಮೀಂದಾರರು - ಹೇಳಿಕೊಳ್ಳುವಂತಹ ಸ್ಥಿತಿವಂತರಲ್ಲ. ಒಟ್ಟಿನಲ್ಲಿ ಜಿಯಂಗಾರರ ಮಾತಿನ ತಾತ್ಪರ್ಯವೆಲ್ಲ ಧರ್ಮಕರ್ತರ ಪದವಿ ಅಧಿಕಾರವನ್ನು ತಾವು ಪಡೆಯುವುದರತ್ತಲೇ ಹರಿದಿದ್ದಿತು. ಮೊದಲಿಗೆ ಮಹಂತರ ಜೊತೆಸೇರಿ ಕೆಲಸ ಮಾಡಲೂ ತಯಾರಾಗಿದ್ದ ಜಿಯಂಗಾರ್ಯರು ಈಗ ಮಹಂತರ ಯೋಗ್ಯತೆಯಲ್ಲಿಯೇ ಕೊರತೆಯನ್ನು ಕಾಣಲು ಪ್ರಯತ್ನಿಸುತ್ತಿದ್ದಾರೆ. ಮಹಂತರು ತಿರುಪತಿಯಲ್ಲಿ ಮೂವತ್ತು ವರ್ಷಗಳಿಂದ ಇದ್ದಾರೆ. ಬಂಗಾಳಕ್ಕೆ ಸೇರಿದ ಗೌಡ ಬ್ರಾಹ್ಮಣ ಮತಸ್ಥರಾದ ಅವರು ತೆಂಗಲೆ ವಡಗಲೆ ಎಂಬ ಯಾವ ಪಂಗಡಕ್ಕೂ ಸೇರಿದವರಲ್ಲದ ವೈಷ್ಣವರಾಗಿದ್ದಾರೆ. ತಿರುಪತಿಯ ಆಲಯವು ಶೈವ ವೈಷ್ಣವರೆಲ್ಲರಿಗೂ ಆರಾಧನೀಯ ಸ್ಥಳವಾಗಿದ್ದು ವಡಗಲೆ ತೆಂಗಲೆ ವ್ಯತ್ಯಾಸಕ್ಕೆ ಅತೀತವಾದದ್ದಾಗಿದೆ. ಮಹಂತರು ಆಲಯವನ್ನೂ ಅಲ್ಲಿನ ಪೂಜೆಯನ್ನೂ ವಿಶೇಷವಾದ ಗೌರವಾದರಗಳಿಂದ ಕಾಣುತ್ತಾರೆ.

ತೆಂಗಲೆ ವಡಗಲೆ ಪಂಗಡಗಳಿಗೆ ಸೇರದವರಾಗಿರುವುದರಿಂದ ಮಹಂತರಿಗಿಂತಲೂ ಹೆಚ್ಚು ಸೂಕ್ತವಾದ ಆಯ್ಕೆಯನ್ನು ಈ ವಿವಾದಾತೀತ ಹಿನ್ನೆಲೆಯಲ್ಲಿ ಮಾಡಲಾಗದು. ಈ ಪಂಥದವರಲ್ಲಿ ಬ್ರಹ್ಮಚರ್ಯವು ನಿಯತವಾಗಿರುವುದರಿಂದಾಗಿ ಇದು ಅನರ್ಹತೆಗಳಲ್ಲಿ ಒಂದಾಗದು. ಇತರರೊಡನೆ ಸುಲಭವಾಗಿ ಬೆರೆಯುತ್ತಾರೆ. ನನಗೆ ಖುದ್ದು ಭೇಟಿಯಾಗಿ ಪೂಜೆಯ ಬಗ್ಗೆ ಆಲಯದ ಆಡಳಿತದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವಿವರಿಸಿದ್ದಾರೆ. ಜಿಯಂಗಾರರು ನನ್ನನ್ನು ಭೇಟಿಯಾಗಿಲ್ಲ. ಕಚೇರಿಯಲ್ಲಿ ನನ್ನನ್ನು ಕಾಣುವುದು ಅವರಿಗೆ ಬೇಕಿಲ್ಲ. ಆಲಯದಿಂದ ಹೊರಕ್ಕೆ ಅನೇಕ ಸ್ಥಳಗಳು ಅವರಿಗೆ ಕಲುಷಿತವಾಗಿ ಕಂಡುಬರುತ್ತವೆ.''

ಮಂಡಳಿಯು ಒಂದು ಪ್ರಶ್ನೆಯನ್ನೆತ್ತಿತು. ಇಂತಹ ಒಂದು ಬಹುಮುಖ್ಯವಾದ ಅಧಿಕಾರವನ್ನು ಒಬ್ಬನೇ ವ್ಯಕ್ತಿಗೆ ಒಪ್ಪಿಸುವುದು ಸಮಂಜಸವೇ? ಅಂತಹ ವ್ಯಕ್ತಿ ಎಷ್ಟೆ ಮಾನನೀಯನೇ ಆಗಿದ್ದರೂ ಅಧಿಕಾರ ಭಾರ ಹೊರುವಲ್ಲಿ ಹೊಣೆಗಾರಿಕೆಯಿಂದ ನಡೆಯುವನೇ? ಈ ಪ್ರಶ್ನೆಗೆ ಉತ್ತರ ನೀಡುತ್ತ ಜಿಲ್ಲಾಧಿಕಾರಿ ಬರೆಯುತ್ತಾನೆ - ಆಲಯದ ಆಡಳಿತವನ್ನು ಸೂಕ್ತ ವ್ಯಕ್ತಿಗೆ ಒಪ್ಪಿಸುವುದಾದಲ್ಲಿ ಈ ಧರ್ಮಕರ್ತನ ಯೋಗ್ಯತೆ, ಮರ್ಯಾದೆಗಳ ಜೊತೆಗೆ ಆಲಯಕ್ಕು, ಸಾಮಾನ್ಯ ಜನರಿಗೂ ನ್ಯಾಯಾಲಯದ ರಕ್ಷಣೆಯೂ ದೊರೆಯುತ್ತದೆ. ಹೀಗೆ ಮನಮಾನಿಯ ಹಾಗೂ ಅಪ ಆಡಳಿತದ ವಿರುದ್ಧ - ಸಾಕಷ್ಟು ಅಡೆತಡೆಗಳನ್ನು - ರಕ್ಷಣೆಯನ್ನು ಕಲ್ಪಿಸಬಹುದಾಗಿದೆ. ಮೈಸೂರಿನ ಮಹಾರಾಜರೂ, ಇತರ ಜಮೀಂದಾರರೂ ಆಲಯದ ಆಡಳಿತದ ವಿಷಯದಲ್ಲಿ ತಾವು ತಲೆಹಾಕಲು ಸಾಧ್ಯವಿಲ್ಲವೆಂದು ತಿಳಿಸಿದ್ದಾರೆ. ಇಂತಹ ಸಮಯದಲ್ಲಿ ಸಮಾಜದಲ್ಲಿ ಗೌರವಾದರಗಳನ್ನು ಹೊಂದಿದ ಉನ್ನತ ನೆಲೆಯ ವ್ಯಕ್ತಿಗಳನ್ನು - ಹುಡುಕುವುದೇ ಕಷ್ಟ. ಅವರೂ ಹೊಣೆಯನ್ನು ಹೊರಲು ಸಿದ್ಧರಾಗಿ ಮುಂದೆ ಬರಬೇಕಾಗುತ್ತದೆ. ಮಹಂತರು ಜಿಯಂಗಾರರೊಂದಿಗೆ ಸೇರಿ ಕೆಲಸ ಮಾಡಲು ನಿರಾಕರಿಸಿದ್ದಾರೆ. ಮಹಂತರೂ, ಜಿಯಂಗಾರರೂ, ಸೇರಿ ಕೆಲಸ ಮಾಡುವಂತೆ ಮಾಡಲು ನಾನು ಪ್ರಯತ್ನ ಮಾಡಿದೆನಾದರೂ ಫಲಕಾರಿಯಾಗಲಿಲ್ಲ. ಇತರ ಕಾರಣಗಳೊಂದಿಗೆ ಮಹಂತರು ಮುಂದು ಮಾಡುವ ಒಂದು ಕಾರಣವೆಂದರೆ ''ಸ್ವತಃ ಜಿಯಂಗಾರರು ಮಾಸಿಕ 47-4-00 ರೂಗಳ ವೇತನದಲ್ಲಿ ಕೆಲಸ ಮಾಡುತ್ತಿದ್ದು ಯಾವಾಗ ಬೇಕಾದರೂ ತೆಗೆದು ಹಾಕಬಹುದಾದ ಪದವಿ ಅದು. ವಂಶ ಪಾರಂಪರ್ಯವಾಗಿ ಬಂದದ್ದಲ್ಲ.''

ತಮ್ಮ ವಾದವನ್ನು ಕ್ರೋಢೀಕರಿಸುತ್ತ ಜಿಲ್ಲಾಧಿಕಾರಿ ಹೇಳುವುದೆಂದರೆ ''ಸಾಮಾನ್ಯ ಅನುಭವದ ಪ್ರಕಾರ ಆಡಳಿತವನ್ನು ಒಬ್ಬರ ಕೈಗೇ ಕೊಡುವುದು ಉತ್ತಮ. ಆಲಯದ ಆಡಳಿತವನ್ನು ಕಂಪನಿ ಸರ್ಕಾರವು ಬಿಟ್ಟುಕೊಡುವುದೇ ಆದಲ್ಲಿ ಸಂಯುಕ್ತ ಆಡಳಿತದಲ್ಲಿಟ್ಟು ಗೊಂದಲದ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬರುವ ಭವಿಷ್ಯದ ಬಗ್ಗೆ ಯೋಚಿಸಿ, ಅಂತಹ ಒಂದು ವಿಧಾನ ಪ್ರಯೋಗಬಾಹಿರವೆಂದು ಭಾವಿಸುತ್ತ ಏಕವ್ಯಕ್ತಿ ಆಡಳಿತ ರೀತಿಯೇ ಸೂಕ್ತವೆಂದು ಹೇಳಬಹುದಾಗಿದೆ. ಪರಿಸ್ಥಿತಿಗಳು ತಂತಾವೆ ದಾರಿ ತೋರುತ್ತವೆ. ಎರಡನೆಯದಾಗಿ ಮಹಂತರಿಗಿಂತ ಚೆನ್ನಾದ ಆಯ್ಕೆಯ ಅವಕಾಶವೇ ಇಲ್ಲ. ಆಲಯದ ಸೇವೆಗಳಲ್ಲಿ ಒಂದು ಭಾಗವಾಗದೆ, ಆಲಯದ ಪೂಜೆ ಪುರೋಭಿವೃದ್ಧಿಗಳಲ್ಲಿ ಅತ್ಯಂತ ಆಸಕ್ತಿ ಹೊಂದಿದವರಾಗಿ, ತೆಂಗಲೆ ವಡಗಲೆಯ ವಿವಾದಗಳಲ್ಲಿ ಬೀಳದೆ, ಸಮಾಜದ ಹತ್ತೂ ಮಂದಿಯಿಂದ ಮಾನ್ಯತೆ ಪಡೆದು, ಸ್ವತಃ ದೊಡ್ಡ ಮಂದಿಯೆಂಬ ಹೆಸರಿಗೆ ಪಾತ್ರವಾಗಿರುವ ಮಹಂತರಿಂದ ಯಾವುದೇ ವ್ಯಕ್ತಿಯ ಪಕ್ಕು



ಹತ್ತೀರಾಮಜೀ ಹಾಗೂ ಶ್ರೀನಿವಾಸರ ಪಗಡೆಯಾಟದ ಚಿತ್ರವಿರುವ ತಿರುಮಲೆಯ ಆಲಯದ ಬೆಳ್ಳಿಯ ಬಾಗಿಲು.

ಭಾದ್ಯತೆಗಳಿಗೂ ಧಕ್ಕೆಯುಂಟಾಗದೆ, ಆಲಯದ ಆಡಳಿತ ಸುಗಮವಾಗಿ ನಡೆಯುವುದೆಂದು ಭರವಸೆ ಹೊಂದಬಹುದಾಗಿದೆ.''

ಮಂಡಳಿ ಹಾಗೂ ಪ್ರಾದೇಶಿಕ ಸರ್ಕಾರಗಳು ಈ ಯೋಜನೆಯನ್ನು ಒಪ್ಪಲು ಸಿದ್ಧವಾಗಿದ್ದವು. ಅವಕ್ಕೆ ಕೇಂದ್ರ ಸರ್ಕಾರದ ದೃಷ್ಟಿಯಲ್ಲಿ ಚೆನ್ನಾದ ವರ್ತನೆಯನ್ನು ಹೊಂದಿದಂತೆ ತೋರಿಸಿಕೊಳ್ಳುವ ಆಸಕ್ತಿಯಿದ್ದಿತು. ಆಲಯದ ಅತಿ ಹೆಚ್ಚಿನ ಆದಾಯವನ್ನು ಬಿಡುವುದರಲ್ಲಿ ಸ್ಥಳೀಯ ಸರ್ಕಾರಕ್ಕೆ ಸಮ್ಮತಿಯಿಲ್ಲ ಎಂಬ ಗುಮಾನಿ ಕೇಂದ್ರಕ್ಕೆ ಉಂಟಾಗದಂತೆ ತುರ್ತಾಗಿ ಯಾರ ತಲೆಗಾದರೂ ಜವಾಬ್ದಾರಿಯನ್ನು ಕಟ್ಟಿ ಕೈ ತೊಳೆದುಕೊಳ್ಳಬೇಕಾಗಿದ್ದಿತು. 1843 ರ ಸೆಪ್ಟಂಬರ್ ತಿಂಗಳಲ್ಲಿ ಮಹಂತ ಸೇವಾದಾಸರು ತಿರುಮಲ - ತಿರುಪತಿ ದೇವಸ್ಥಾನಗಳ ಪ್ರಥಮ ವಿಚಾರಣ ಕರ್ತರಾಗಿ ಆಡಳಿತವನ್ನು ವಹಿಸಿಕೊಂಡರು. 1933 ರಲ್ಲಿ ತಿರುಮಲ - ತಿರುಪತಿ ದೇವಸ್ಥಾನಗಳ ಕಾಯದೆಯನ್ನು (1939 ರಲ್ಲಿ ಪರಿಷ್ಕೃತವಾಯಿತು.) ಜಾರಿಗೆ ತರುವವರೆಗೆ ಹತ್ತೀರಾಮಜೀ ಮಠದ ಮಹಂತರ ಆಡಳಿತದಲ್ಲಿ ತಿರುಮಲೆ - ತಿರುಪತಿ ಆಲಯಗಳ ಆಡಳಿತ ಸಾಗಿಬಂದಿತು.

ಹೀಗೆ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯವು ತಿರುಪತಿಯ ಗೋವಿಂದ ರಾಜಸ್ವಾಮಿ ಆಲಯ ಕೋದಂಡರಾಮಾಲಯ, ಕಪಿಲೇಶ್ವರಸ್ವಾಮಿ ಆಲಯ, ತಿರುಚಾನೂರಿನ ಪದ್ಮಾವತೀ ಅಮ್ಮನವರ ಆಲಯಗಳನ್ನು 1843 ರ ಸೆಪ್ಟಂಬರಿನಲ್ಲಿ ತಿರುಪತಿಯಲ್ಲಿದ್ದ ಹತ್ತೀರಾಮಜೀ ಮಠದ ಮಹಂತ ಸೇವಾದಾಸರಿಗೆ ಒಪ್ಪಿಸಲಾಯಿತು. ಈ ಬಗೆಗಿನ ಒಪ್ಪಂದದ ಮುಚ್ಚಳಿಕೆಯನ್ನು 1843 ರ ಏಪ್ರಿಲ್ 21 ರಂದು ಸಹಿಮಾಡಲಾಯಿತು. ಅದರ ಪ್ರಕಾರ ಮಹಂತರು ತಮ್ಮ ಶಿಷ್ಯಪ್ರಶಿಷ್ಯರ ಮೂಲಂ ಆಲಯಗಳ ಆಡಳಿತವನ್ನು, ದೈನಂದಿನ ಪೂಜೆಗಳನ್ನೂ ನಡೆಸಿಕೊಂಡು ಹೋಗಬೇಕೆಂದು ಕಟ್ಟಳೆಯಾಯಿತು. ಬಲವಾದ ಒತ್ತಾಯ ಹಾಕಿದ ಮೇಲೆ ಆರಂಭದ ವೆಚ್ಚಗಳಿಗೆಂದು ಅವರಿಗೆ 5000 ರೂಪಾಯಿಗಳನ್ನು ಮಂಜೂರು ಮಾಡಿ ಕೊಡಲಾಯಿತು.

ಕ್ರಿ.ಶ. 1843 ರ ಹೊತ್ತಿಗೆ, ಆಲಯದ ಭೂಮಿಗಳನ್ನು ಗುತ್ತಿಗೆ ನೀಡುವುದರಿಂದ ಉಂಟಾದ 40 ಲಕ್ಷ ರೂಪಾಯಿಗಳು ಕಂಪನಿಯ ವಶದಲ್ಲಿದ್ದಿತೆಂದು ತಿಳಿದುಬರುತ್ತದೆ. ನೆಲ್ಲೂರಿನ ವಕೀಲರಾದ ಶ್ರೀ ಎ.ಎಸ್. ಕೃಷ್ಣರಾಯರು ಹಿಂದಿನ ಶತಮಾನ ಎರಡನೇ ದಶಕದಲ್ಲಿ ಮದರಾಸಿನ ಶಾಸನ ಸಭೆಯಲ್ಲಿ ಈ ಬಗ್ಗೆ ಹಲವು ಬಾರಿ ಪ್ರಶ್ನೆಗಳನ್ನು ಎತ್ತಿ ತಿರುಪತಿ ದೇವಸ್ಥಾನಕ್ಕೆ ಈ ಹಣವನ್ನು ಹಿಂದಿರುಗಿಸಬೇಕೆಂದು ವಾದ ಮಾಡಿದ್ದರು. ಅಸ್ಪಷ್ಟವಾದ ಉತ್ತರಗಳನ್ನು ಕೆಲಬಾರಿ ನೀಡಿ, ಆ ಬಗೆಗಿನ ಯಾವುದೇ ದಾಖಲೆಯೂ ಇಲ್ಲವೆಂದು ಕಡೆಗೆ ನಿರಾಕರಿಸಲಾಯಿತು.



## ಯಾತ್ರಿಕ ಭಕ್ತರಲ್ಲಿ.....

## ವಿನಂತಿ

**''ಡಯಲ್ - ಯುವರ್ ಇ.ಓ.''**



ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

*ದೂರವಾಣಿ ಸಂಖ್ಯೆ - 08574-77261*

ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು
ತಮ್ಮ ಸುಲಭತರ ಯಾತ್ರೆ ಕೈಗೂಡಲು
ದಯವಿಟ್ಟು ಮಾತನಾಡಿ.



# ವಾರ್ತಾ ಲಹರಿ

## ವೈಭವದ ವಸಂತೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ವಾರ್ಷಿಕ ವಸಂತೋತ್ಸವಗಳು ಏಪ್ರಿಲ್ 6 ರಿಂದ 8 ರ ವರೆಗೆ ಮೂರುದಿನ ಅತ್ಯಂತ ವೈಭವದಿಂದ ನೆರವೇರಿದವು. ಸಾವಿರಾರು ಮಂದಿ ಈ ಉತ್ಸವದಲ್ಲಿ ಭಾಗವಹಿಸಿ ಸ್ವಾಮಿಯನ್ನು ನೋಡಿ ಸಂತಸಪಟ್ಟರು.

ವಸಂತೋತ್ಸವದ ಭಾಗವಾಗಿ ಮೊದಲನೆಯದಿನ ಶ್ರೀ ಮಲಯಪ್ಪಸ್ವಾಮಿ ಉಭಯ ನಾಯಕಿಯರೊಡನೆ ಆಲಯದ ಹಿಂದಿನ ವಸಂತ ಮಂಟಪಕ್ಕೆ ಆಗಮಿಸಿ ವಸಂತೋತ್ಸವದಲ್ಲಿ ಪಾಲುಗೊಂಡರೆ ಮಾರನೆಯದಿನ ಎಂದರೆ 7 ರಂದು ಶನಿವಾರ ಸ್ವರ್ಣರಥದಲ್ಲಿ ವಸಂತಮಂಟಪಕ್ಕೆ ಆಗಮಿಸಿದರು. ಶ್ರೀ ಮಲೆಯಪ್ಪಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ನೂತನ ರೇಷ್ಮೆ ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಹೂವಿನ ಹಾರಗಳಿಂದಲೂ ಅಲಂಕರಿಸಿ ರಥ ಮಂಟಪಕ್ಕೆ ಕರೆತಂದು ಬಂಗಾರದ ರಥವನ್ನು ಏರಿಸಲಾಯಿತು. ಭಕ್ತರ ನಯನಾನಂದಕರವಾದ ರಥ ಕದಲುತ್ತಿರಲು ಭಕ್ತರು ಆನಂದದಿಂದ ಉಘೇ ಉಘೇ ಹೇಳುತ್ತಿದ್ದರು. ಗೋವಿಂದನಾಮ ಗಾಯನದಿಂದ ತಿರುಮಲೆಯ ಬೆಟ್ಟ ತುಂಬಿದ್ದಿತು.

ವಸಂತೋತ್ಸವದ ಕಡೆಯ ದಿನ ತಿರುಮಲೆಯ ಆಲಯದ ಗರ್ಭಗಡಿಯ ಬಹು ದೇವತಾ ವಿಗ್ರಹಗಳೆಲ್ಲ ಮೆರವಣಿಗೆಯಲ್ಲಿ ಭಾಗವಹಿಸಿದ್ದವು. ಶ್ರೀ ಮಲೆಯಪ್ಪಸ್ವಾಮಿ ಉಭಯ ನಾಯಕಿಯರೊಡನಿದ್ದರೆ, ಶ್ರೀ ಕೋದಂಡರಾಮಸ್ವಾಮಿ ಸೀತಾಲಕ್ಷ್ಮಣ ಸಹಿತವಿದ್ದರು. ಶ್ರೀಕೃಷ್ಣಸ್ವಾಮಿಯೂ ರುಕ್ಮಿಣಿಯೊಡನೆ ಉಪಸ್ಥಿತರಿದ್ದರು. ಒಂದು ಸೊಗಸು ಎಂದರೆ ಆಲಯದ ಗರ್ಭಗುಡಿಯಲ್ಲಿರುವ ಆಜ್ಞಾಪಾಲಕ ಹನುಮಂತ ಶ್ರೀ ಕೋದಂಡರಾಮರ ಜೊತೆಯಲ್ಲಿಯೇ ಹೊರಗೆ ಬಂದು ಮೆರವಣಿಗೆಯಲ್ಲಿ ಭಾಗವಹಿಸಿದ್ದುದು. ಊರಿನ ರಥಬೀದಿಗಳಲ್ಲಿ ಉತ್ಸಾಹಪೂರ್ಣವಾಗಿ ಮೆರವಣಿಗೆ ತರಲಾಯಿತು.

ಈ ಕಾರ್ಯಕ್ರಮಗಳಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ, ಅರಣ್ಯ ಶಾಖಾಧಿಕಾರಿ ಶ್ರೀ ವೆಂಕಟರಾಮಯ್ಯ, ಮುಖ್ಯ ಭದ್ರತಾಧಿಕಾರಿ ಶ್ರೀ ಕೆ. ಆರ್. ಎಂ. ಕಿಶೋರಕುಮಾರ್ ಆಲಯ ಡೆಪ್ಯೂಟಿ ಇ.ಓ. ಶ್ರೀ ಕೆ. ನಾಗೇಶ್ವರರಾವು ಮೊದಲಾದ ಹಿರಿಯರು ಭಾಗವಹಿಸಿದ್ದರು. (ಚಿತ್ರಗಳನ್ನು ವರ್ಣದಲ್ಲಿ ಸಾದರ ಪಡಿಸಲಾಗಿದೆ.)

## ಗೋವಿಂದರಾಜಸ್ವಾಮಿ ಆಲಯದಲ್ಲಿ ಮುಕುರ ಮಂಟಪ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ಸ್ವಾಮಿಯ ಉಯ್ಯಾಲೆಗೆಂದು ಒಂದು ಕನ್ನಡಿಕೋಣೆ - ಮುಕುರ ಮಂಟಪ - ಏರ್ಪಡಿಸಲಾಗಿದೆ.

ಈಚೆಗೆ ಏರ್ಪಾಡಾದ ಈ ಮುಕುರ ಮಂಟಪದಲ್ಲಿ ಪ್ರತಿಶುಕ್ರವಾರ ಸಂಜೆ ಶ್ರೀ ಗೋವಿಂದರಾಜಸ್ವಾಮಿಯ ಹಾಗೂ ಉಭಯ ನಾಯಕಿಯರ ಉತ್ಸವವಿಗ್ರಹಗಳನ್ನು ಆಂದೋಲಿಕೆಯಲ್ಲಿಟ್ಟು - ಉಯ್ಯಾಲೆಯಲ್ಲಿ ಆಸೀನಗೊಳಿಸಿ - ತೂಗಲಾಗುವುದು. ರೂ. 116 ಶುಲ್ಕ ನೀಡಿ ಭಕ್ತರು ಈ ಆರ್ಜಿತ ಸೇವೆಯನ್ನು ಮಾಡಿಸಬಹುದಾಗಿದೆ.

ಆರಂಭ ಸಂದರ್ಭದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಮೊದಲಾದ ಹಿರಿಯರು ಅಧಿಕಾರಿಗಳ ಜೊತೆಗೆ ಉಯ್ಯಾಲೆ ಸೇವೆಯಲ್ಲಿ ಭಾಗವಹಿಸಿದ್ದರು.

## ಮೆಟ್ಟಿಲ ಉತ್ಸವ

ಏಪ್ರಿಲ್ 16 ರಂದು ಮಂಗಳವಾರ ತಿರುಪತಿಯಿಂದ ತಿರುಮಲೆಗೆ ಇರುವ ಮೆಟ್ಟಿಲಹಾದಿಯ ಪ್ರತಿ ಮೆಟ್ಟಿಲಿಗೂ ಪೂಜೆ ಮಾಡುತ್ತ ಸ್ವಾಮಿ ಸನ್ನಿಧಿಯನ್ನು ಸೇರುವ ಮೆಟ್ಟಿಲೋತ್ಸವ ಅತ್ಯಂತ ಸಡಗರ ಸಂಭ್ರಮಗಳಿಂದ ಸಂಪನ್ನವಾಯಿತು. ಕರ್ನಾಟಕ ತಮಿಳುನಾಡು, ಕೇರಳ, ಆಂಧ್ರಪ್ರದೇಶಗಳ ಸುಮಾರು 200 ಭಜನಸಂಘಗಳ ಆರುಸಾವಿರ ಮಂದಿ ಭಕ್ತರು - ಆಬಾಲವೃದ್ಧ ಸ್ತ್ರೀಪುರುಷರು - ಭಕ್ತಿ ಆದರ ಗೌರವ ಪ್ರೀತಿಗಳಿಂದ ಪಾಲುಗೊಂಡರು.

ಮೆಟ್ಟಿಲೋತ್ಸವದ ಭಕ್ತಜನ ಸಂದೋಹವನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಸ್ವಾಗತಿಸಿ, ಮೆಟ್ಟಿಲೋತ್ಸವದ ಆರಂಭವನ್ನು ನೆರವೇರಿಸಿಕೊಟ್ಟರು. ತಿರುಮಲೆಯ ಪಾವಿತ್ರ್ಯವನ್ನು ಪರಿಶುಭ್ರತೆಯನ್ನು, ಪರಿಶುದ್ಧತೆಯನ್ನು ಕಾಪಾಡುವ ಹೊಣೆಗಾರಿಕೆ ಪ್ರತಿಯೊಬ್ಬ ಭಕ್ತನಿಗೂ ಸಮಾನವಾದುದು ಎಂದು ನುಡಿಯುತ್ತ ದೀಪವನ್ನು ಬೆಳಗಿಸಿದ ಅವರು ದೇವರಿಗೆ ಪ್ರೀತಿಯಾಗುವಂತೆ ಭಕ್ತರ ನಡವಳಿಕೆ ಶುದ್ಧವಾಗಿ, ಶಿಸ್ತುಸಂಯಮಗಳಿಗೆ ಒಳಪಟ್ಟಿರಲಿ ಎಂದು ಹಾರೈಸಿದರು.

ಈ ಕಾರ್ಯಕ್ರಮದಲ್ಲಿ ತಿ.ತಿ.ದೇ. ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಡಾ|| ಎಚ್. ಎಸ್. ಬ್ರಹ್ಮಾನಂದ. ಪೌರಸಂಬಂಧ ಶಾಖಾಧಿಕಾರಿ ಶ್ರೀ ಸುಭಾಷ್‌ಗೌಡ್, ಮೆಟ್ಲಪೂಜಾ ಸಮಿತಿಯ ಆಯೋಜನೆಗಾರ ಶ್ರೀ ಅನಂತನಾರಾಯಣ ಅಡಿಗಳರ್, ಕಾರ್ಯದರ್ಶಿ ಶ್ರೀ ಎಂ. ಸಿ. ನರಸಿಂಹನ್ ಪಾಲುಗೊಂಡಿದ್ದರು. ಸರಿಸುಮಾರು 6000 ಮಂದಿಯು ಈ ಮೆಟ್ಟಿಲ ಉತ್ಸವದಲ್ಲಿ ಪಾಲುಗೊಂಡರೆಂದು ನುಡಿದ ಅವರು ಈ ಬಾರಿಯ ಉತ್ಸವ 32 ನೆಯದಾಗಿದೆ ಎಂದರು.

## ತಿರುಮಲೆಯಲ್ಲಿ ಧ್ಯಾನಮಂದಿರ

ತಿರುಮಲೆಯಲ್ಲಿ ಆಲಯದ ಸಮೀಪದಲ್ಲಿ ಸ್ವಾಮಿ ಪುಷ್ಕರಿಣಿಯ ಎದುರು ರಾಮಬಗೀಚ ವಸತಿಗೃಹಗಳ ಮಾರ್ಗದಲ್ಲಿ ಇದ್ದ ವೈಭವೋತ್ಸವ ಮಂಟಪವನ್ನು ಯಾತ್ರಿಕರ ಸೌಕರ್ಯಾರ್ಥ ಧ್ಯಾನಮಂದಿರವಾಗಿ ಪರಿವರ್ತಿತ ಗೊಳಿಸಲಾಗಿದೆ.

ಆರಂಭ ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಅರಣ್ಯಾಧಿಕಾರಿ ಶ್ರೀ ವೆಂಕಟರಾಮಯ್ಯ, ಧರ್ಮ ಪ್ರಚಾರಪರಿಷತ್ ಕಾರ್ಯದರ್ಶಿ ಡಾ|| ಎಚ್. ಎಸ್. ಬ್ರಹ್ಮಾನಂದ ಮೊದಲಾದವರು ಭಾಗವಹಿಸಿದರು.

ಆಲಯದ ಸಮೀಪದಲ್ಲಿ ಬಂಗಾರದ ರಥದ ಮಂಟಪದ ಬದಿಯಲ್ಲಿರುವ ಈ ಪ್ರಶಾಂತ ವಾತಾವರಣದಲ್ಲಿ ಉಂಟಾಗಿರುವ ಧ್ಯಾನ ಮಂದಿರ ವಿಶಾಲವಾಗಿದ್ದು ಒಮ್ಮೆಗೇ ಐದಾರು ನೂರುಮಂದಿ ಕುಳಿತು ಧ್ಯಾನ ಸಾಧನೆಯಲ್ಲಿ ತೊಡಗಲು ಅನುಕೂಲ ಆಗಿರುವುದು. ಹೊರಗಿನ ಜನನಿಬಿಡತೆಯ ಒತ್ತಡಗಳನ್ನು ಮರೆಸುವ, ಒಳಗೆ ಇಣುಕಿ ಆತ್ಮಾವಲೋಕನ ಮಾಡಿಕೊಳ್ಳಲು ಅನುಕೂಲಮಾಡಿಕೊಡುವ ಸ್ಥಳವಿದು ಎಂದು ಯಾತ್ರಿಕರು ಮಾತನಾಡಿಕೊಳ್ಳುತ್ತಿದ್ದುದ್ದು ಕೇಳಿಬಂದಿತು.

## ಯಶಸ್ವಿ ಹನುಮಜ್ಜಯಂತಿ

ಕರ್ನಾಟಕದ ದೇವರಾಯನ ದುರ್ಗದ ಪ್ರಸಾದ ನಿಲಯದಲ್ಲಿ ಏಪ್ರಿಲ್ 7,8 ರಂದು ಹನುಮಜ್ಜಯಂತಿ ಉತ್ಸವಗಳು ಯಶಸ್ವಿಯಾಗಿ ನಡೆದವು. ಬೆಂಗಳೂರಿನ ಶ್ರೀಧಾಸಕೂಟ ಸೇವಾಟ್ರಸ್ಟ್, ತುಮಕೂರು ಕರಿಗಿರಿ ಭಕ್ತವೃಂದ ಹಾಗೂ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಸಂಯುಕ್ತ ಆಶ್ರಯದಲ್ಲಿ ನಡೆದ ಹನುಮ ಜಯಂತಿ ಉತ್ಸವಗಳಲ್ಲಿ ದೇವರಾಯನ ದುರ್ಗದ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ಮೆಟ್ಟಿಲೋತ್ಸವವೂ ಕಲೆತು ಬಂದಿತು.

7-4-2001 ರ ಶನಿವಾರ ಸುಪ್ರಭಾತ ನಗರಸಂಕೀರ್ತನೆಗಳು ನಡೆದು ಜಯಂತಿ





ತಿರುಮಲೆಯ ಧ್ಯಾನಮಂದಿರ ಆರಂಭ ಚಿತ್ರಗಳೆರಡು.



ಈಚೆಗೆ ತಿರುಪತಿಯ ಮಹತಿ ಸಭಾಂಗಣದಲ್ಲಿ ಧ್ಯಾನಮಂದಿರವನ್ನು ಆರಂಭಿಸಲಾಯಿತು. ಆ ಸಂದರ್ಭದಲ್ಲಿ ತೆಗೆದ ಚಿತ್ರ.



ಆಂಧ್ರಪ್ರದೇಶದ ರಾಜ್ಯಪಾಲರಾದ ಶ್ರೀ ರಂಗರಾಜನ್ ಅವರು ಅವರ ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿದಾಗ ತೆಗೆದ ಚಿತ್ರ.

ಉತ್ಸವವನ್ನು ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ಉದ್ಘಾಟಿಸಿದರು. ಶ್ರೀ ಎಚ್. ವ್ಯಾಸಣ್ಣಾಚಾರ್ಯರು ದಾಸಸಾಹಿತ್ಯದಲ್ಲಿ ವಾಯುಜೀವೋತ್ತಮತ್ವದ ಬಗ್ಗೆಯೂ, ಶ್ರೀ ಪವಮಾನಾಚಾರ್ಯರು ದಾಸಸಾಹಿತ್ಯದಲ್ಲಿ ಭಾಗವತದ ಸಾರದ ಬಗ್ಗೆಯೂ ಮಾತನಾಡಿದರು. ಪ್ರಾಣದೇವರ ಪೂಜೆ ಯಥಾ ಸಾಂಗವಾಗಿ ನಡೆಯಿತು. ಅಂದು ಸಂಜೆ ಭಜನೆಕಾರ್ಯಕ್ರಮವಾದ ಬಳಿಕ ಶ್ರೀ ಬಾಟ್ನಿ ರಾಮಚಂದ್ರಾಚಾರ್ಯರು ಉಪನ್ಯಾಸ ಮಾಡಿದರು. ಶ್ರೀ ಕೆ. ಅಪ್ಪಣ್ಣಾಚಾರ್ಯರು ನರಸಿಂಹ ಪ್ರಾದುರ್ಭಾವದ ಬಗ್ಗೆ ವಿವರಿಸಿದರು.

8-4-2001 ರಂದು ಭಾನುವಾರ ದೇವರಾಯನ ದುರ್ಗದ ಮೆಟ್ಟಿಲ ಪೂಜೆ ಪ್ರತಿಮೆಟ್ಟಿಲಿಗೂ ಪೂಜೆ ಮಾಡುತ್ತ ಭಜನೆ ಮಾಡುತ್ತ ಯೋಗಾನರಸಿಂಹ ಆಲಯವನ್ನು ಭಕ್ತ ವೃಂದಗಳು ಸೇರಿದವು. ಶ್ರೀರಂಗನಾಥ ಭರದ್ವಾಜರಿಂದ ಹರಿಕಥಾಮೃತಸಾರದ ಬಗ್ಗೆ ಉಪನ್ಯಾಸನಡೆಯಿತು. ಅಂದು ಸಂಜೆ ಶ್ರೀ ಮುರುಗೋಡುದಾಸರು ಕೀರ್ತನ ಸೇವೆ ಸಲ್ಲಿಸಿದರು. ಅವರನ್ನು ಶ್ರೀ ದಾಸಕೂಟ ಸಭಾದ ಕಾರ್ಯನಿರ್ವಾಹಕ ಶ್ರೀ ಎನ್.ವಿ. ಸುಂದರರಾಯರ ನೇತೃತ್ವದಲ್ಲಿ ಸನ್ಮಾನಿಸಲಾಯಿತು.

ಮೆಟ್ಟಿಲೋತ್ಸವದಲ್ಲಿ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್‌ಗೆ ಪರಿಚಯವಾದ 22 ಭಜನಾಮಂಡಳಿಗಳು ಭಾಗವಹಿಸಿದ್ದವು. ತಿ.ತಿ.ದೇ. ಧಾರ್ಮಿಕ ಪುಸ್ತಕದಂಗಡಿಯ ಏರ್ಪಾಡಾಗಿ ಹತ್ತುಸಾವಿರ ರೂಪಾಯಿಗಳ ಮೌಲ್ಯದ ಪುಸ್ತಕಗಳೂ, 8,500 ರೂ. ಮೌಲ್ಯದ ಕ್ಯಾಸೆಟ್‌ಗಳೂ ಮಾರಾಟವಾದವು.

### ಚಿಂತಾಮಣಿಯಲ್ಲಿ ತಿ.ತಿ.ದೇ. ಕಲ್ಯಾಣಮಂಟಪ

ಕರ್ನಾಟಕದ ಚಿಂತಾಮಣಿ ನಗರದ ಕನ್ನಂಪಲ್ಲಿ ವೀರಾಂಜನೇಯಸ್ವಾಮಿ ಆಲಯದ ಬದಿಯಲ್ಲಿ ತಿ. ತಿ. ದೇವಸ್ಥಾನಗಳ ಕಲ್ಯಾಣ ಮಂಟಪ ನಿರ್ಮಾಣವಾಗಿದ್ದು ಏಪ್ರಿಲ್ 16 ರಂದು ಚಿಂತಾಮಣಿ ಶಾಸಕ ಶ್ರೀ ಚೌಡರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಉದ್ಘಾಟನೆ ನಡೆಸಿದರು.

ತಿ.ತಿ.ದೇ. ಕಲ್ಯಾಣ ಮಂಟಪಗಳು ಲಾಭನಷ್ಟಗಳ ಗೊಡವೆಗೆ ಹೋಗದೆ ಸದುಪಯೋಗದಲ್ಲಿ ಸಾರ್ಥಕವಾಗಬೇಕು ಎಂದು ಕರೆ ನೀಡಿದ ಕಾರ್ಯನಿರ್ವಹಣಾಧಿಕಾರಿಗಳು ತಿರುಪತಿಯಲ್ಲಿ ತಿರುಮಲೆಯಲ್ಲಿ ಯಾತ್ರಿಕರಿಗೆಂದು ಹಲವು ರೀತಿಯ ಸೇವಾ ಸದುಪಾಯಗಳನ್ನು ಕಲ್ಪಿಸುತ್ತಿರುವುದಾಗಿಯೂ ಇವನ್ನೆಲ್ಲ ಸಾರ್ಥಕಗೊಳಿಸುವಲ್ಲಿ ಭಕ್ತರ ಸಹಕಾರ ಅತ್ಯಗತ್ಯ ಎಂದು ನುಡಿದರು.

ಕೋಲಾರದ ಸಂತತ್ ಸದಸ್ಯ ಶ್ರೀ ಕೆ. ಎಚ್. ಮುನಿಯಪ್ಪ, ಶಾಸಕ ಶ್ರೀ ಭೈರೇಗೌಡ, ಲೋಕಸಭಾಸದಸ್ಯ ಶ್ರೀ ರಾಮಕೃಷ್ಣಾರೆಡ್ಡಿ ಮಾಜಿಶಾಸಕ ಶ್ರೀ ಅಮರನಾಥರೆಡ್ಡಿ ಮೊದಲಾದವರು ಭಾಗವಹಿಸಿದ್ದರು.

### ಬರ್ಡ್ ಇನ್‌ಛಾರ್ಜ್ ನಿರ್ದೇಶಕರಾಗಿ ಡಾ|| ವೆಂಕಟಲಕ್ಷ್ಮಿ

ತಿರುಪತಿಯಲ್ಲಿ ತಿರುಮಲ ತಿರುಪತಿ ದೇವಸ್ಥಾನಗಳ ವತಿಯಿಂದ ನಡೆದಿರುವ ಬರ್ಡ್ (ಅಂಗವಿಕಲರ ಆರೋಗ್ಯಧಾಮ) ಆಸ್ಪತ್ರೆಯ ನಿರ್ದೇಶಕರಾಗಿದ್ದ ಡಾ|| ಜಗದೀಶ್ ಅವರು ರಜೆಯ ಮೇಲೆ ವಿದೇಶಗಳಿಗೆ ಹೋಗಿರುವುದರಿಂದ ಅವರ ಸ್ಥಾನದಲ್ಲಿ ಇನ್‌ಚಾರ್ಜ್ ನಿರ್ದೇಶಕರಾಗಿ ಸೀನಿಯರ್ ವೈದಾಧಿಕಾರಿ ಡಾ|| ವೆಂಕಟಲಕ್ಷ್ಮಿ ಅವರನ್ನು ನಿಯಮಿಸಲಾಗಿದೆ.

### ವಿಜ್ಞಾನ - ವಿಕಾಸ ಮಂದಿರ ಆರಂಭ

ತಿರುಪತಿಯಲ್ಲಿರುವ ತಿ.ತಿ.ದೇ. ಆಡಳಿತ ಭವನದಲ್ಲಿನ ಅನುಬಂಧವಾಗಿರುವ ಕಟ್ಟಡದಲ್ಲಿ ಉದ್ಯೋಗಿಗಳ ಬಿಡುವಿನ ಕಾಲಕ್ಷೇಪದ ಕೋಣೆಯನ್ನು ಆರಂಭಿಸಲಾಗಿದೆ. ಇದರ ಆರಂಭವನ್ನು ನಡೆಸಿದ ಕಾರ್ಯ ನಿರ್ವಹಣಾಧಿಕಾರಿಗಳು ಉದ್ಯೋಗಿಗಳ ಮಾನಸಿಕ ವಿಕಾಸವೂ ಇಲ್ಲಿ ನಡೆಯುವುದು ಎಂದು ಆಶಿಸುತ್ತ ಧಾರ್ಮಿಕ ಕೇಂದ್ರವೂ ಆಗಿ ಬೆಳೆಯಲಿ ಎಂದು ಹಾರೈಸಿದರು.

### ರೂ. 70 ಸಾವಿರ ವಂತಿಗೆ

ಗುಜರಾತಿನ ಭೂಕಂಪ ಸಂತ್ರಸ್ತ ಜನರ ನೆರವಿಗೆಂದು ತಿ.ತಿ.ದೇ. ನಿವೃತ್ತಸಿಬ್ಬಂದಿ ಸಂಘದ ವತಿಯಿಂದ ಎಪ್ಪತ್ತು ಸಾವಿರ ರೂಪಾಯಿಗಳ ವಂತಿಗೆಯನ್ನು ನೀಡಲಾಗಿದೆ. ಈ ಸಂಬಂಧದ ಚೆಕ್ ಅನ್ನು ತಿ.ತಿ.ದೇ. ಕಾರ್ಯ ನಿರ್ವಹಣಾಧಿಕಾರಿಗಳಿಗೆ ಸಮರ್ಪಿಸಲಾಯಿತು. ಈ ಕಾರ್ಯಕ್ರಮದಲ್ಲಿ ಪದವಿನಿವೃತ್ತರಾದ ಡಾ|| ವೇಣುಗೋಪಾಲರೆಡ್ಡಿ, ಶ್ರೀ ಸಿಂಗಿರಾಜು ಸಚ್ಚಿದಾನಂದಂ, ಶ್ರೀ ಲಕ್ಷ್ಮೀಪತಿ - ಮೊದಲಾದವರು ಭಾಗವಹಿಸಿದ್ದರು. ಹತ್ತಿರದಲ್ಲಿಯೇ ಮತ್ತೂ ಹಣವನ್ನು ಹೊಂದಿಸಿ ನೀಡುವುದಾಗಿ ತಿಳಿಸಿದರು.

Edited and Published on behalf of T. T. Devasthanams by Dr. N. S. Rama Murthy, and printed at T.T.D. Press
by I. Parvateeswara Rao, Manager, T. T. D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

### ಮಾಡಬೇಕಾದವು :

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ದರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ ''ಓಂ ನಮೋ ವೇಂಕಟೇಶಾಯ'' ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ, ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

### ಮಾಡಬಾರದವು :

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗುಲು ಮಾಡದೆ ಸರತಿಯಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.

★ ಆಲಯದೊಳಗೆ ಉಗುಳುವುದೇ ಮೊದಲಾದವುಗಳನ್ನು ಮಾಡದಿರಿ..